ಮನ್ಯಂತೇ ಕೇಽಪಿ ಘನಂ ಪರ್ವತಮುಕ್ತಂ ನಿಗೂಢಯಾ ವಾಚಾ ।
ಪ್ರಾದುರ್ಭವತಿ ಗಭೀರಧ್ವನಿರವಿಷಹ್ಯಾಽತಃ ಶಕ್ತಿಃ ॥

—ವಾಸಿಷ್ಠಗಣಪತಿಮು. ನಿ.

# ಒಳನೋಟ

# ನನ್ನ ನುಡಿ

ಜೀವನದಲ್ಲಿ ಗೆಳೆತನಕ್ಕಿಂತ ಹೆಚ್ಚಿನದಿಲ್ಲ, ಪವಿತ್ರತರವಾದುದಿಲ್ಲ. ಮೈತ್ರಿಯೆಂಬುದು ಮಾನವನಿಗೆ ದೇವ ಕೊಟ್ಟಿರುವ ಒಂದು ವರ. ಅದು ಆನಂದಗಂಗೆಯ ಅತ್ಯುಚ್ಚವಾದ ಉಗಮ. ಗೆಳೆತನವೆಂಬುದು ನನಗೆ 'ಮಧುರಾದಪಿಮಧುರತರಂ' ಎಂದು ಹೇಳಬಯಸುತ್ತೇನೆ.

ಸಖ್ಯದಲ್ಲಿ ದಿವ್ಯತೆಯುದೆ. ಶಾರೀರಿಕ ಸಂಬಂಧವು ಸ್ನೇಹವೃದ್ಧಿಗೆ ಅನಗತ್ಯ. ಸಂಸ್ಕೃತರಾದ ವ್ಯಕ್ತಿಗಳಿಗೆ ಪರಸ್ಪರರಲ್ಲಿ ಆತ್ಮೀಯತೆಯನ್ನು ಬೆಳೆಸಲು ರಕ್ತಸಂಬಂಧ ಬೇಕಿಲ್ಲ; ಭಾವೈಕ್ಯ ಅಥವಾ ಸಹೃದಯತೆ ಇದ್ದರೆ ಸಾಕು.

ಸಹೃದಯನಿಗಿರಬೇಕಾದುದು 'ಸಹಾನುಭೂತಿ'. ಆ ಶಬ್ದದಿಂದಲೇ ಗೊತ್ತಾಗುವಂತೆ ರಸಿಕನು ತನ್ನ ಸನ್ಮಿತ್ರನಾದ ಕವಿಯು ಮಾತನಾಲಿಸು ವಾಗ ತೆರೆದ ಹೃದಯದಿಂದ ಇದ್ದು ಅವನ ಅನುಭವಗಳಲ್ಲಿ ತಾದಾತ್ಮ್ಯ ಹೊಂದುತ್ತಾನೆ. ತೆರೆದ ಹೃದಯದಿಂದ ಕೇಳುವುದೆಂದರೆ ಪೂರ್ವಸಿದ್ಧ ವಾದ ಅಭಿಪ್ರಾಯಗಳನ್ನು ದೂರವಿರಿಸಿ ಕೇವಲ ಮಿತ್ರಾಭಿಪ್ರಾಯ ಗ್ರಾಹಕ ನಾಗಿ ಒಂದೇ ಮನಸ್ಸಿನಿಂದ ಲಕ್ಷ್ಯವಿಟ್ಟು ಕೇಳುವುದು; ಇದೇ ತಲ್ಲೀನತೆ ಅಥವಾ ತಾದ್ಧಾತ್ಮ್ಯ. ಅದರಂತೆ ಇದು ನನ್ನದು, ಇದು ನನ್ನದಲ್ಲ, ಅದು ಅವನದು, ಮತ್ತೊಂದು ಅವನದಲ್ಲ—ಎಂದೆನ್ನದೆ ಹೇಳುಗನ ಅನುಭವ ಗಳನ್ನು ತನ್ನವೇ ಎಂದು ಕೇಳುಗನು ತಿಳಿದು ತನ್ನ ಹೃದಯದಲ್ಲಿ ಅವುಗಳಿಗೆ ಸ್ಥಳಮಾಡಿಕೊಡುವುದು ಸಹಾನುಭವದ ಲಕ್ಷಣ. ನೇಹಿಗರೇ, ನಿಮ್ಮಿಂದ ನಾನು ಇಂತಹ ಸಹಾನುಭೂತಿಯನ್ನು ಬಯಸುತ್ತೇನೆ. ನಿಮಗೆ ಈ ಕವನ ಸಂಗ್ರಹವನ್ನು ಅರ್ಪಿಸಿದ್ದೇನೆ.

ಗೆಳೆತನದ ಮಧುವನ್ನು ಪಾನಮಾಡಿದ, ಮಾಡುತ್ತಿರುವ ಮತ್ತು ಎಷ್ಟು ಪಾನಮಾಡಿದರೂ ತಣಿಯದ ತದೇಕಮಗ್ನವಾದ ನನ್ನ ಈ ಹೃದ ಯವು ಮಿತ್ರ ದೇವತೆಗಳನ್ನು ಈ ಮೂಲಕ ಆಲಿಂಗಿಸುತ್ತದೆ. ಮೈತ್ರಿಯು

ರಸಿಕತೆಯ ಬೀಜ. ಮಿತ್ರರ ಮಾತು ಶ್ರವಣಕ್ಕೆ ಮಧುರ, ಮಿತ್ರರ ನೋಟ ನಯನಕ್ಕೆ ಮಧುರ. ಮಿತ್ರರ ಮುಖದಲ್ಲಿ ಆನಂದವಲ್ಲಿಯ ವಿಲಾಸ, ಮಿತ್ರರ ಹೃದಯದಲ್ಲಿ ಆತ್ಮೀಯತೆಯ ವಿಕಾಸ! ಮಿತ್ರರೇ ನಿಮ್ಮ ಸುಧಾಸ್ಯಂದಿ ಯಾದ ಸಹೃದಯತೆಯಿಂದ ನನ್ನ ಜೀವ ಬೆಳಕನ್ನು ಕಾಣಲಿ!

'ಜನ್ಮಕಥಾ' ಎಂಬ ಕವನ ದಿವಂಗತ ಠಾಕೂರರ 'ಜನ್ಮಗಾಥಾ' ಎಂಬ ಗೀತವನ್ನನುಸರಿಸಿ ರಚಿಸಲಾಗಿದೆ.

ಈ ಕವನಗಳಲ್ಲಿ ಕೆಲವು 'ಜಯಂತಿ', 'ಜಯಕರ್ನಾಟಕ' ಮೊದ ಲಾದ ಮಾಸಿಕಗಳಲ್ಲಿ ಈ ಮೊದಲು ಅಚ್ಚಾಗಿವೆ. ಆ ಕಾರಣದಿಂದ ಆಯಾ ಸಂಪಾದಕ ಮಿತ್ರರಿಗೆ ನಾನು ಸದಾ ಕೃತಜ್ಞ. ಈಗ ಈ ಸಂಗ್ರಹ ವನ್ನು ಪ್ರಕಟಿಸಿದ 'ಮಿತ್ರ ಸಂಘ'ದ ಶ್ರೀ ದೊರೆಸ್ವಾಮಿಯವರ, ಇತರ ವಿಚಾರಗಳಲ್ಲಿ ನೆರವಿತ್ತ ನನ್ನ ಪ್ರಿಯಮಿತ್ರ ರಾಮರಾಯರ ಮತ್ತು ಪುಸ್ತಕ ವನ್ನು ಸುಂದರವಾಗಿ ಅಚ್ಚು ಮಾಡಿಕೊಟ್ಟ ಶ್ರೀ ಚಿಂತಾಮಣಿಯವರ ಉಪ ಕಾರವನ್ನು ಮರೆಯಲಾರೆ.

ಭಟಕಲ
೧೦-೧೨-೧೯೪೫

ಬ. ಹೆ. ಶ್ರೀಧರ.

# ಗುರುವಿನ ಅಡಿದಾವರೆಯಲ್ಲಿ

ನಮೋ ಗುರುವೆ ತವ ಚರಣ ಕಮಲದಲಿ ಪತಿತನಾದೆನಣ್ಣ
ನಿನ ಕುಮಾರರಲಿ ನಾನೊಬ್ಬನೆಂದು ತಿಳಿ ಎಲ್ಲರಿಂದ ಸಣ್ಣ || ಪ ||

ಕಡಲಿನೊಳಗಿನಾ ಕಡ್ಡಿಯಂತೆವೊಲು ತೇಲಿ ಬಂದೆನಣ್ಣ
ನಡೆ ನಡೆದು ಹಾದಿಯನು ಕತ್ತಲಲ್ಲಿ ನಾ ಕಳೆದುಕೊಂಡೆ ಕಣ್ಣ
ಹಸುಳೆತನದೊಳೂ ಹಾಲು ಕಂಡ ನೆನಪೆನಗೆ ತೀರ ಅಲ್ಪ
ನಸು ನಸುಕು ಹರಿಯಲಿರೆ ಮತ್ತೆ ಕಂಡೆ ಮರುಕಳಿಸಿ ಬರುವ ಕಲ್ಪ

ಆಸೆಪಾಸೆಗಳ ಮಾಲೆ ಮಾಡಿ ಮುಡಿಸಿದೆನು ನನ್ನ ಮನಕೆ
ಆಯಾಸವಲ್ಲದಿನ್ನೊಂದು ಫಲಿಸಿದುದ ಕಾಣೆನಣ್ಣ ನಿಜಕೆ
ಎಳವೆಯಲ್ಲಿ ಜವ್ವನವ ಕಾಂಬೆನೆಂದೆಂಬ ಆಸೆಯಿತ್ತು
ಈ ಬೆಳೆವ ಕಾಲ ಮುಪ್ಪಾಗಿ ಬಾರದೇಕೆನುವುದಿನ್ನು ಮಿತ್ತು

ನಾನು ನನ್ನ ಹುಟ್ಟೂರಲಿದ್ದ ನೆಲೆ ಮೊದಲೆ ಮಾರಿ ಕೊಟ್ಟೆ
ಕಾನೀನನಂತೆ ಕಾದಾಡಿ ಕಡೆಗು ಈ ಬಾಳಿನಲಿ ಕೆಟ್ಟೆ
ಹಲವು ಕೈಯ ಹದ ಸವಿದೆ ಮತ್ತೆ ಕಹಿ ಎಂದು ಕೆಲವನುಗಿದೆ
ನೆಲಜಲದ ಗುಣವ ಬೇರ್ಮಾಡಿ ನೋಡಿದೆನು ಆದರೆಲ್ಲ ಬರಿದೆ

'ಕಳ್ಳುಬಳ್ಳಿ' ಕಂಡವರು ಕೇಳಿದವರೆಂಬರಿಲ್ಲದಾಗಿ
ಬೆಳ್ಳುಳ್ಳಿ ಕೂಡ ಸಿಗದಾಯ್ತು ಮದ್ದಿಗೂ ಕಾಲಚಕ್ರ ತಿರುಗಿ
ಹರುಷ ಎಂಬುದರ ಹೆಸರ ಕೇಳದೇ ವರುಷ ಸಂದುಹೋಯ್ತು
ಈ ವರುಷ ಲೋಕದಲಿ ಪಟ್ಟ ಪಾಡುಗಳಿಗೆಣೆಯೆ ಇಲ್ಲವಾಯ್ತು

ಅಂಕೆ ಅಂಕೆಗಳ ಪಂಕದಲ್ಲಿ ಉರುಳಾಡಿ ದಣಿದೆ ಬಹಳ
ಪರರಂಕೆಯೆಂದರೇ ಬಗೆಯು ಬೆಂಕೆಯಾಗುರಿಯುದಿಹುದು ವಿರಳ

ನಿನ್ನ ಗೀತಗಳನೆನ್ನುತಿದ್ದ ಅರೆನಿಮಿಷ ಮಾತ್ರ ಶಾಂತಿ
ಕ್ಷೀರಾನ್ನವುಂಡರೂ ಮೈಗೆ ಹತ್ತದೈ ಬೇರೆ ಎಲ್ಲ ಭ್ರಾಂತಿ

ಒಡಲನಿತ್ತವರ ಒಡಲ ಸಂಕಟವ ತಣಿಸಲಾರದಾಗಿ
ಬೆಂದೊಡಲಿನಿಂದ ಬೆಂಡಾದೆ ಗುರುವೆ ನಾ ಸತ್ತು ಸುಣ್ಣವಾಗಿ
ನಂಬಿಕೆಗಳು ನಯವಾಗಿ ಜಾರಿದವು ಸದ್ದು ಸುಳಿವು ಇರದೆ
ಕೂರಂಬಿನಂತೆ ನೆಟ್ಟಿರುವ ಚಿಂತೆಯಲಿ ಐಕ್ಯವಾಗಿ ಬೆರೆದೆ

ಹಾಡಿ ಹರಸಿದಾ ನಿನ್ನ ಕಾಣಬೇಕೆಂಬ ಆಸೆ ಬಳ್ಳಿ
ತಾ ನೋಡಿ ಹೂತುದಿಂದೆನ್ನ ಬಾಳಿನಲಿ ಮೂಡಿತೆಂಬೆ ಬೆಳ್ಳಿ
ಅಂಧಕಾರದಲಿ ಮಿಂಚು ಮೂಡಿ ಬರುವಂತೆ ಬಂದ ಬಂಧು
ಏನೆಂದು ನಿನ್ನ ಸತ್ಕರಿಸಲೆಂಬುದೇ ತಿಳಿಯದಾಯಿತಿಂದು

ಹುರುಪೆ ಇಲ್ಲದೀ ತಿರುಪೆ ಬಾಳಿನಲಿ ಏನ ಹೇಳಬಲ್ಲೆ
ಒಂತುರುಪು ಇಲ್ಲದೇ ಆಟ ಹೇಳಿದರೆ ಸೋಲು ಸಿದ್ಧವಲ್ಲೆ
ಏಸು ಕಾಲವೀ ದಾಸವೃತ್ತಿಯೆಂದರಿಯದಾಯ್ತು ಗುರುವೆ
ನಿನ ಕೂಸು ನಾನು ಎಂದರ್ತಿಯಿಂದ ನಿನ್ನನ್ನೆ ಮರೆಯ ಹೊಗುವೆ

———

# ಆಹ್ವಾನ

ಕೆಂದಾವರೆಯಲಿ ಹುಟ್ಟಿದ ಬೊಮ್ಮನ ಕಣ್ದಾವರೆ ಕವಿವೃಂದಹಿತೇ
ಮಂದಾರೋಜ್ವಲ ಕಾಂತಿಯುತೇ | ಬಾರೌ ಮಹಿತೇ || ಪ ||

ಸಾರಸ್ವತ ಸುರಸಿಂಧುಸಮೀರಣ ಸೇವಿತ ಪಾದಪಯೋಜಯುತೇ
ಸಾರಾಸಾರವಿಚಾರ ವಿಲೋಕನ ಲೋಚನಯುಗಳ ವಿಳಾಸಯುತೇ
ತಾರಾಮಂಡಲಸನ್ನಿಭ ಭಾವಸಮುಚ್ಚಯ ಶೋಭಿತ ತನ್ವಿಯಹೆ
ಧಾರಾಧರನಿರ್ಮುಕ್ತತಟಿಲ್ಲತೆಗೋರಗೆಯೆನೆ ನರ್ತಿಸುತಲಿಹೆ

ಭಾವವೆ ನಗೆ, ಮೇಣ್ ನವರಸವೊಳಬಗೆ, ಜೀವದುಸಿರು ಪ್ರತಿಭಾ ಶಕ್ತಿ
ಹಾವವೆ ಸುಂದರ ಶೈಲಿ, ವಿಭೂಷಣ ಭೂಷಣ, ಗುಣವರ್ಧ ವ್ಯಕ್ತಿ
ಆವೇಶದಿ ಪುಟಿಪುಟಿದು ಪ್ರಫುಲ್ಲಿತಮಾದ ಮೊಗದಿನೊಪ್ಪುವ ಚೆಲುವೆ
ಕೇವಲ ಸಹೃದಯ ಹೃದಯ ಮಧುವ್ರತಕೊಲಿವ ಕುಸುಮ ನೀನಾಗಿರುವೆ

ಮೂಡುವ ಮುಂಬೆಳಗೊಪ್ಪುವ ಕುಂಕುಮರಾಗದ ತಿಲಕವ ತಿದ್ದಲಿದೆ
ಹಾಡುವ ಹಕ್ಕಿಯು ಹಸೆಗೆ ಕರೆದು ಮುದದಲ್ಲಿ ನಿನ್ನ ತೆಗೆದದ್ದಲಿದೆ
ಕೂಡಿದ ತರುಲತೆಗುಲ್ಮಗಳೊಟ್ಟೀ ಹಸಿರುಡೆಯಿತ್ತಿವೆ ತೊಡು ತರಳೇ
ನಾಡಿನ ಜನಜೀವನದ ವಿಕಸ್ವರ ಮುಕುಳವೆನಿಸಿ ಕಂಗೊಳಿಸುವಳೇ

ಮಾನಸಮಾನಸಹಂಸಿ, ಮನೋಮುಕುರಾಂತರಭಾಸಿತ ಕಲ್ಪಲತೇ
ಮಾನಿತೆ ಬಾರೌ ಮುದದಲಿ ಮಿಂದು ಮನೋಗತರಾಗರಸಾಕಲಿತೇ
ಜಾನಿಸಿ ಜೋಗಿಗಳೊಂದುವ ಸೊಗವನು ಜಾನಿಸದೆಯೆ ದೊರಕಿಸಿ ಕೊಡುವೆ
ಮಾನಿನಿ, ಕವಿಕಮಲೋದ್ಭವ ಭಾಮಿನಿ, ಮಾನಿಸಿ ಪದೆದಾಹ್ವಾನಿಸುವೆ

———

## ಪುಟ್ಟದೊಂದು ಪಟ್ಟಣ

ಪುಟ್ಟದೊಂದು ಪಟ್ಟಣ । ನನ್ನ ಪುಟ್ಟ ಚಿತ್ತದಲ್ಲಿ
ಪುಟ್ಟದೊಂದು ಪಟ್ಟಣ ॥ ಪ ॥

ನನ್ನ ಪುಟ್ಟ ಚಿತ್ತದಲ್ಲಿ ಪುಟ್ಟದೊಂದು ಪಟ್ಟಣ,
ಆ ಪುಟ್ಟ ಪಟ್ಟಣದಲಿ ಪುಟ್ಟದೊಂದು ತೋಟ;

ತೋಟದಲ್ಲಿ ಬಯಕೆ ಬಳ್ಳಿ
ಹೂವ ಬಿಟ್ಟು ಹಸಿರನುಟ್ಟು
ಬಾಗಿ ಬಳುಕಿ ನಿಂದಿರೆ
ತೂಗು ಬಿಳಲ ಹೊಂದಿರೆ—
ತೂಗಿಕೊಂಡು ತಿಳ್ಳಿಯಾಡಿ ಸುಳ್ಳಸುಳ್ಳೆ ಸುಳಿದು ಹಾಡಿ
ಆ ತೋಟದಲ್ಲಿ ನಲಿದೆನೇ ॥ ಪುಟ್ಟದೊಂದು............

ಶ್ರಾವಣನೂ ನಗುನಗುತ
ಬರಲು ಮುಗಿಲ ನಲು ನೆಗೆತ
ಕಂಡು ಕೋಗಿಲೆತ್ತಲು
ಹಿಗ್ಗಿ ದನಿಯನೆತ್ತಲು
ಅದರ ದನಿಗೆ ದನಿಯು ಕೂಡಿಸುತ್ತ ಮೆಲ್ಲ ಮೆಲ್ಲನಲ್ಲಿ
ಮುದವ ಹೀರಿ ಮುದವ ಬೀರಿದೆ ॥ ಪುಟ್ಟದೊಂದು............

ಪುಟ್ಟ ಪಟ್ಟಣದಲಿ ಎಲ್ಲ ಪುಟ್ಟ ಪುಟ್ಟ ಮಾತು
ಪುಟ್ಟ ಕಾಲು ಪುಟ್ಟ ಕಣ್ಣು ಪುಟ್ಟ ನಡಿಗೆ ನೋಟ,

ಪುಟ್ಟ ಉಡಿಗೆ ಪುಟ್ಟ ತೊಡಿಗೆ
ಪುಟ್ಟ ಹಗಲು ಪುಟ್ಟ ಇರುಳು
ಪುಟ್ಟತನವು ನೆರೆದಿರೆ
ಇಷ್ಟ ಸುಖವು ತೆರೆದಿರೆ—
ಪುಟ್ಟ ನಲ್ಲೆ ನಲ್ಲರೆಲ್ಲ ಒಟ್ಟು ಕೂಡಿ ನಲಿವರಲ್ಲಿ
ದಿಟ್ಟತನದಿ ಸರಸವಾಡುತ || ಪುಟ್ಟದೊಂದು............

ನನ್ನ ಪುಟ್ಟ ಪಟ್ಟಣದಲಿ
ನನ್ನ ಪುಟ್ಟ ಬಾಳ ಬೆಳಗಿ
ನನ್ನ ನಾನು ಮರೆತಿರೆ
ನನ್ನೊಳಾನು ಬೆರೆತಿರೆ—
ನನ್ನ ಬಯಕೆ ಮಲರಿ ಕಂಪ ಸೂಸುತಿರಲು 'ದೊಡ್ಡ' ಜಗದ
ಕಳ್ಳ ಬಂದು ಕೊಯ್ದುಬಿಟ್ಟನೇ || ಪುಟ್ಟದೊಂದು............

———

## ಎಷ್ಟು ಛಲವಿರಲೇನು....

ತಲೆಯೆತ್ತಿ ನಿಂದು ಮೂಲೋಕವನು ಮೆಚ್ಚಿಸಿಹ
ಹಿಮವಂತ ಹೊತ್ತಿರುವ ಮುಕುಟ ಕೂಡ
ಸೆಲೆಯಾಗಿ ಹರಿದಿತ್ತು ತಪನಾತಪಾಹತಿಗೆ
ಇರವೆಂದಮೇಲಿಳಿತವಿಹುದು ನೋಡ!

ಹಿಗ್ಗಿನಲಿ ಮೈಮರೆದು ಬಂಡೆಗಳ ಕೊರೆಕೊರೆದು
ನುಗ್ಗಿಬಹ ನೀರು ನೀರಾದರೇನು,
ತಗ್ಗುತಗ್ಗಿಗೆ ಬಾಗಿ ಮುಗ್ಗರಿಸಿ ನಡೆದಿತ್ತು
ಬಗ್ಗದಾತನು ಕೂಡ ಬಗ್ಗದಿರನು!

ರತ್ನವನು ರತ್ನದಿಂದಲೆ ಕೊಯ್ದು ನರನ ಪ್ರ
ಯತ್ನ ಫಲಿಸದೆ ಹೋಯ್ತು ಶಾಂತಿವಡೆಯೆ ;
ನಿತ್ಯಸಿದ್ಧವಿದೆಂದು ನಂಬಿದಲ್ಲಿಯು ಕೂಡ
ಸ್ಥಿತ್ಯಂತರವು ತೋರ್ಕು ನಿಂತ ಕಡೆಯೆ!

ಲೆಕ್ಕಣಿಕೆ ಕರವಾಳಕಿಂತ ಬಲಶಾಲಿಯೆಂ
ದೊಕ್ಕಣಿಸಿಧಾ ಕವಿಯು ಮಾತಿಗೀಗ
ತುಕ್ಕು ಹಿಡಿದಿದೆ ಹಸಿವು ನರನ ಬಸಿರನು ಹೊಕ್ಕು
ಹಕ್ಕಲಾರಿಸು ಎಂದು ನೂಕಿದಾಗ!

ತಾಳಲಾರದ ಮೇಲೆ ತಾಳ್ಮೆಯೆಲ್ಲಿಯದಯ್ಯ
ತೋಳು ಮುರಿದವನ ಬಲವ ಹೇಳಲೇನು?

ಬೀಳಲೊಲ್ಲದ ಮಹಾ ಸ್ಥಾವರವು ಮಳೆ ಜಡಿದು
ಬೇರು ಕಳಚಿದ ಮೇಲೆ ನಿಲುವುದೇನು?

ಬಿಟ್ಟ ಬಾಣವು ಹುಸಿಯದಿರುವ ರಾಧೇಯನೂ
ಕಟ್ಟುಬಿದ್ದನು ತಾಯ ನುಡಿಗೆ ತಾನು;
ಎಷ್ಟು ಛಲವಿರಲೇನು ವಿಧಿ ಬಂದವುಂಕಿದರೆ
ಕೆಟ್ಟ ನರ ಹರಹರಾ, ಹೇಳಲೇನು!

———

# ದುಂಬಿ ಬಾರ

ದುಂಬಿ ಬಾರ ಮನದುಂಬಿ ಬಾರ ಮನ–
ದುಂಬಿ ಬಾರ ಬಾ, ನೆಳಲಿನೊಲು || ಪ ||

ಮೂಡಲ ಮರೆಯಲಿ ಮೆಲ್ಲಮೆಲ್ಲನೆಲ–
ರೇರಿ ಬರುವ ಎಳ ನೇಸರೊಲು
ನೋಡ ನೋಡುತಿರೆ ನಯನೋನ್ಮೀಲನ
ಗೈದು ನಿಲುವ ನಲ್ಮಲರವೊಲು
ತುಂಬಿದ ಬೆಳಕನು ಬಿಂಬಿಸಿ ಮೊಗದಲಿ
ಹರಿದು ಹಾಯ್ವ ತಿಳಿ ಮೋಡದೊಲು
ಕೊಂಬೆ ಕೊಂಬೆಗೂ ಪ್ರಭಾತದೊಸಗೆಯ
ಹಾಡಿ ಹಾರುವ ವಿಹಂಗದೊಲು || ದುಂಬಿ........

ಚಂದ್ರಚಂದ್ರಿಕಾ ಪ್ರಣಯೋದಧಿಯಲಿ
ಮಿಂದು ಬಂದ ತಾರಗೆಯವೊಲು
ಮಂದ ಮಂದ ಗತಿಯಿಂದ ಬಳುಕುತಿಹ
ಕುಂದವಲ್ಲರಿಯ ಕುಡಿಯವೊಲು
ಅಂದ ಚಂದದಾನಂದ ವಿಕಸ್ವರ–
ಗೀತ ನೂತನಾವೇಶದೊಲು
ನಿಂದ ನಿಲುವಿನಲೆ ತ್ರಿಲೋಕವೆಲ್ಲವ
ಮೋಹಪಾಶದಿಂ ಬಿಗಿವವೊಲು || ದುಂಬಿ... ...

ಸರಸವಾಕ್ಸುಧಾವರ್ಷಪರಿಪ್ಲುತ-
    ನಿರುಪಮ ರಮಣೀ ಹಾಸದೊಲು
ಅರಸನುತ್ತಮಾಂಗಸ್ಥಕಿರೀಟದಿ
    ಹೊಳೆವ ಹೇಮರಾಜೀವದೊಲು
ದೇವ ಭಾವಭರಭಕ್ತನೆತ್ತಿಹಿಡಿ–
    ದಾರತಿ ಕೊಳ್ಳುವ ಮೂರ್ತಿಯೊಲು
ಜೀವ ಜೀವಕೂ ನಂಟನು ಬೆಸೆಯಲು
    ಬಾರ ಬಾ ಮನವೆ ದುಂಬಿಯೊಲು || ದುಂಬಿ........

---

# ಬಿರುಗಾಳಿ ಬೀಸು

೧

ಬಿರುಗಾಳಿ ಬಿರುಗಾಳಿ ಬಿರುಗಾಳಿ ಬೀಸು
ಬ್ರಹ್ಮಾಂಡ ಮಂಡಲವ ಹೊಕ್ಕು ಹರಿದೀಸು!
ಹೊಸ ಮಲರ ಸೌಸವವ ಸೂಸು
ಹಳ ಹೊದಿಕೆಗಳ ಹಿರಿದು ಬೀಸು—

ಕಾಲ ತೇಜಿಯನೇರಿ
ಕುರುಡು ಕತ್ತಲ ಮೀರಿ
ಶರಪಾತ ಗತಿಯಿಂದ
ಹರನೇತ್ರದುರಿಯಿಂದ
ಇದ್ದಂತೆ ಇರುವ ಶವದೊಟ್ಟಿಲನು ಸುಡಬಿಸುಟು
'ಇರಬೇಕು' ಎಂಬರಿವ ಬಿತ್ತಿ ಕಳೆ ವ್ಯೆ ಬುಗುಟು!

ಬೀಸು ನಡೆ
ಹಾಸು ಹೆಡೆ
ಬೊಬ್ಬಿರಿದು ಫೂತ್ಕರಿಸು; ಸತ್ತ ಮೃತಕಿಂತಲೂ
ಹಬ್ಬುವುರಿ ವಿಷ ಲೇಸು ಕಾರದನು ಸುತ್ತಲೂ
ವಿಕಟಾಟ್ಟಹಾಸದಲಿ
ಪ್ರಲಯೋಗ್ರ ವೇಷದಲಿ
ಕವಿದು ಬಾ ಬುವಿಗಿಂದು ಕಾಲಾಗ್ನಿ ರುದ್ರ
ವಿವಿಧವಾವಿಷ್ಕರಿಸು ಬಾ ವೀರಭದ್ರ!

೨

ಹಳೆಯ ಜೀವನಸೂತ್ರ ಹರಿದು ಹಾಳಾಯ್ತು,
ಹುಳಿತು ಹಳಸಿದ ಹಿಟ್ಟಿನಂತೆ ಬಾಳಾಯ್ತು;
ತುಕ್ಕು ಹಿಡಿದಿದೆ ಬುದ್ಧಿಯಲಗು
ಸಿಕ್ಕದಾಯ್ತುತ್ಸಾಹ ಬಲೆಗು,
ಧರ್ಮ ದಾಸರ ದಂಡು
ಇಂದು ಜಾಡ್ಯದ ತುಂಡು,
ಕತ್ತರಿಸಿ ಕಡೆಗಂಡು
ಹುಟ್ಟಿಸೈ ಹೊಸದೊಂದು;
ಪ್ರಾಣನರೆಯಾಯ್ತು, ಪುರುಷಾರ್ಥ ಸುಕ್ಕಾಯ್ತು, ಕಾ–
ಲಾಣೆ ಬೆಲೆಗಿಳಿಯಿತೀ ಜೀವನದ ವರ್ತನೆಯು!

ನೆಲೆ ನಿಂತ
ಕೊಳೆ ನೀರ
ತೊಳೆ ಬೀಸಿ ಸಾಗರೋತ್ತುಂಗ ವೀಚಿಯು ತೆರೆದು
ಕೊಳವನ್ನೆ ಹೊಳೆ ಮಾಡು ಮುಸಲಧಾರೆಯು ಕರೆದು,
ಭೂಗರ್ಭದಾಳದಲಿ
ಹುದುಗಿ ಕಂಕಾಲದಲಿ
ಇಹ ಜೀವ ಚಿಹ್ನೆಗಳ ಮುಗುಚಿ ಈಡಾಡು,
ಅಹಹ ಜಂಝಾವಾತ ಬಾ ತೀಡು ತೀಡು!

೩

ಮಿಡಿಯು ಮಿಡಿಯಾಗಿಡಲು ಉಪ್ಪು ಬೆರಸಿದರೂ
ಮಿಡಿತನವದುಳಿಯಿತೇ ಕಳೆಯಲದರೊಗರು?
ಕಟ್ಟುಕಟ್ಟಳೆಯೆಲ್ಲ ಬೇಕು,
ಗುಟ್ಟರಿದು ಬದಲಿಸಲು ಬೇಕು;

ಒಂದರಲಿ ನೂರೊಂದ
ತೋರುವುದೆ ಜಗದಂದ;
ಅದ ಕಾಣದವನಂಧ,
ಅವನಿಗೀ ಭವ ಬಂಧ!
ಹಗಲೆಂಬ ಭ್ರಾಂತಿಯಲಿ ಮುಚ್ಚಂಜೆಯಲಿ ಹುಡುಗ
ತೆಗೆದು ಹೊತ್ತಗೆಯೋದತೊಡಗಿದಂತಾಯ್ತೀಗ—

ಹಗಲಿಲ್ಲ,
ಇರುಳಲ್ಲ!
ಇದು ನರಕವನು ಮೀರಿ ಹೊಯ್ತೆರಕ, ಬಾಳುವೆಯ
ಹದ ಹೊತ್ತಿ ಹೊಗೆ ಸುತ್ತಿತಿದನೆಂತು ತಾಳಲಹ!
ಬಿರುಗಾಳಿ ಹೊಡೆದಾಳಿ,
ಬಿರ್ದಿನಿರುವಳು ಕಾಳಿ,
ಕಡಗಿ ಬಾ ಗುಡುಗಿ ಬಾ ಕೃತಿ ನಿಕೃತಿಯೆನಿಸು;
ಹಡಗ ಹಾರಿಸಿ ವ್ಯೋಮಯಾನವನು ತರಿಸು!

———

# ಎದೆಯ ರಾಣಿಗೆ

ಎಲ್ಲಿರುವೆ ಎಳನಗೆಯ ಗಾಡಿಗಾತಿಯೆ ನಿನ್ನ
ಬಲ್ಲೆನೆಂಬರ ಕಾಣೆ ಹುಡುಕಿ ಸೋತೆ || ಪ ||

ಸುಕುಮಾರತೆಯ ಮುಡಿದ ಸುಕುಮಾರಿಯರು ಹರ್ಮ್ಯ-
ದಾರಾಮುಗಳಲಿ ಕೆಲೆದಾಡುತಿರಲು,
ಲತೆಗೆ ಕೋಮಲತೆಯನ್ನೊಲಿದು ಕಲಿಸುತಿರಲು
ಶುಕವಾಗಿ ಹಾರಿದೆನು ಅವರೊಳೊಬ್ಬಳ ಕಂಡು
ಅಧರ ಬಿಂಬವ ತಿಂಬ ಬಯಕೆಯಿಂದ—
ಆದರಲ್ಲೆ ತಡೆದೆನು ಅಧರ ನಿನ್ನದಲ್ಲ!

ಎಲೆ ಎಲೆಯುನರಸುತ್ತ ಹೊಳಲ ಹೊರ ಮೈಯಲ್ಲಿ
ಬಳಿವಿಡಿದು ಸಾರುತಿರೆ ದಾರಿಯೊಳಗೆ,
ಕಂಡುದಲೆಯುವೇರುಂಜವ್ವನೆಯುರ ಬಳಗ;
ಅಳಕ ಪ್ರತಾನಗಳ ನೇವರಿಸ ಬಗೆದೊಮ್ಮೆ
ಸುಳಿದೆ ಸುಯ್ಯನೆ ಮಂದಪವನನಾಗಿ—
ಆದರಲ್ಲೆ ತಡೆದೆನು ಅಳಕ ನಿನ್ನದಲ್ಲ!

ಹೂ ನಗೆಯ ಹುಡುಗಿಯರು ಹೂದೋಟವೊಂದರಲಿ
ಹುಬ್ಬನೇರಿಸಿ ಕುಳಿತು ನೋಡುತಿರಲು—
ಬಿಡದೆ ಝೇಂಕರಿಸಿದೆನು ಭೃಂಗರಾಜನಾಗಿ;
ಏನೆಂಬೆ ತುಂಟಗೈಯೊಂದೆಸದ ಹೂಜೊಂಪ
ಮೈಯ ಸೋಂಕಿತು, ಮೋದ ಮೂಡಿತೆನಗೆ—
ಆದರಲ್ಲೆ ತಡೆದೆನು, ಜೊಂಪ ನಿನ್ನದಲ್ಲ!

ಕಲಕಂಠವತಿಯರೊಂದಾಗಿ ಬಾಗಿಲ ಹೊರಗೆ
ಮಲೆತು ಸರಸಾಲಾಪ ಗೈಯುತಿರಲು,
ರಾಜ್ಯದಲಸಿಗರ ಬಗೆಗೆ ನಗೆಯಾಡುತಿರಲು
ಬಿನದವುಕ್ಕಿತು, ಉಕ್ಕಲಡಗಿ ಉಲಿವವನಿದ್ದೆ
ಆಣಕವನು ಕೇಳ್ವ ಹೆಬ್ಬಯಕೆಯಿಂದ—
ಆದರಲ್ಲಿ ತಡೆದೆನು ದನಿಯು ನಿನ್ನದಲ್ಲ!

ಊರ ಸನಿಹದ ಕೊಳದ ನಳದ ನೀರನು ಹೊತ್ತು
ನೀರೆಯರು ನಿರಿವಿಡಿದು ಸಾಗುತಿರಲು,
ಒಡನೆ ಹೊಂಚಿ ಮಿಂಚಿದೆನು ಆ ಪಡೆಯ ಮೇಲೆ!
ತೊನೆದೊಮ್ಮೆ ಹುಲ್ಲೆಗಣ್ಬೆಟ್ಟು ದಿಟ್ಟಿಸಿ ಮಿಂಚ-
ನಲ್ಲಗಳೆದಳು ಮುಗುದ ಮೋಡಿಯಿಂದ;—
ಆದರಲ್ಲಿ ತಡೆದೆನು ನೋಟ ನಿನ್ನದಲ್ಲ!

ಪ್ರೇಯಸಿಯೆ ಪ್ರೇಮದರಸಿಯೆ ಪೇಳ ನೀನಾವ
ಮಾಯೆಯಲಿ ನಿಂದೆನ್ನ ಕುಣಿಸುತಿರುವೆ?
ಹೃದಯ ಬಾಯಾಗಿ ಮೊರೆಯಿಡುವುದೊಂದೆ ತಡವೆ;
ನಾಯಿಕೆಯೆ ಎಲ್ಲಿರುವೆ ಮೈದೋರು ವಿರಹದುರಿ
ಸಾಯ ಸುಡುತಿದೆ ಓಡಿಬಾರ ನಲ್ಲೆ!
ನಿನ್ನ ಕರೆದು ಕರೆದಾಸತ್ತೆ ಕರುಣವಿಲ್ಲೆ?

———

## ದೀನ ಲಕ್ಷ್ಮಿಯೆ ಬಾರ....

ಬಾ ತಂಗಿ ಬಾ ತಂಗಿ, ಬಡತನವೆ ಚಿರಸಂಗಿ
ಬಾಳಿನಲಿ ನೀರಿಲ್ಲ; ಬರಡೆ ಎಲ್ಲ
ನಿಟ್ಟುಸಿರ ಹೊಗೆಯೇಕೆ ನಿನ್ನ ನಾಸಾಪುಟದಿ?
ಹುಟ್ಟ ಕೆಟ್ಟಿವು ಅಷ್ಟೆ ಬೇರೆಯಿಲ್ಲ!

ಹೊಲಬುಗೆಟ್ಟಿಲುಬು ಮೈ ತೂರಿ ಬಂದಿಹ ನಿನ್ನ
ಜಲಭರಿತ ನಯನಗಳ ನೋಟದಿಂದ
ಕರುಳನುರಿಯೆಣ್ಣೆಯಲಿ ಕರಿದ ಹಾಗೆನಿಸುತಿದೆ
ಎಳಗುವರಿ ಇಲ್ಲ ನೆರಳಿನ್ನ ಕಂದ!

ಹುಟ್ಟುವಾಗಲೆ ಬೆನ್ಗೆ ಕಟ್ಟಿ ಬಂದಿತು ದೈನ್ಯ,
ಹೊಟ್ಟೆಯತಿ ಹುಲಿಯಾಗಿ ಗರ್ಜಿಸಿತ್ತು;
ಮೆಟ್ಟಿ ನಿಂದಿಹುದೀಗ ಗೋಣನಾಂತೆಲೆ ತಂಗಿ
ಬಿಟ್ಟು ಹೋಗದು ಭೂತ ಬದುಕಲಿತ್ತು!

ಬಾ ಮುದ್ದು ಬಂಗಾರ, ನಿನ್ನ ಎಳ ಮೈಗಿಂದು
ಅಳಲಾಯ್ತು ಪರಿಕಾರ, ದೀನಮುದ್ರೆ-
ಯಿನಿಗಾಯ್ತಲಂಕಾರ, ನನ್ನ ಭುಜ ಕಾಷ್ಠಗಳ
ದಿಂಬಿನಲಿ ಬಡತನದ ಯೋಗನಿದ್ರೆ!

ಒಂದು ದಿನ ಈ ಜಗದ ಬೆಳಕೆಂಬ ಕತ್ತಲೆಯ
ಕಂಡು ಮನಸೋತು ಮುದವೆಂದು ತಿಳಿದು,
ಹೊಂದದಾಡಿದೆವಿಂದು ಆದು ಮುದದ ನೆರಳೆಂದು
ನೊಂದು ಮಿಡುಕುವ ಪಾಡು ಬಂತೆ ನಿನಗೂ!

ದೇವಧರ್ಮವಿಚಾರ ಸತ್ಯತೆ ಸದಾಚಾರ
ಯಾವುದಿದ್ದರು ಉಂಡ ಹೊಟ್ಟೆಗೆಲ್ಲ;
ಕಾವರಿಲ್ಲದ ಕರುಣನಂದನರ ಬಾಳಿನಲಿ
ಯಾವುದೂ ನೆರವಲ್ಲ ಇದ್ದು ಇಲ್ಲ!

ಪುಟ್ಟ ಗಲ್ಲವು ಜೋತುಬಿದ್ದಿರುವುದೇಕಮ್ಮ?
ಕಟ್ಟಕಟುಕನು ನಾನು ಬದುಕಿರುವೆನೆ!
ಹುಟ್ಟೆ ಹುಳವಾದೆ ನಾನಕ್ಕಟಾ ಎದೆವನೆಯ
ಪುಟ್ಟ ಗಿಣಿ ಬಾ, ಅಳಲಿಗಳಲನೀವೆ!

ದೀನ ಲಕ್ಷ್ಮಿಯೆ ಬಾರ, ದಯೆಯ ಭಿಕ್ಷುಕ ಕರೆವ
ಕಾನನವೆ ಗತಿಯೆಮಗೆ ಪೋಪ ಬಾರ;
ಮಾನವಂತರ ಜಗವು ನಮಗಲ್ಲ; ನಮಗಿಲ್ಲ
ಹೀನತೆಯ ತಿರಿದುಂಬ ತಂಗಿ ಬಾರ!

———

# ಅಯ್ಯೋ ನನ್ನ ಮೆಚ್ಚುಗಳಿರ!

೧

ಬನ್ನಿ ಬನ್ನಿ ನಗೆಯ ತನ್ನಿ
ಕಿಸಲಯ ಕೋಮಲೆಯರೇ,
ಮನದ ಬಳ್ಳಿ ಬಿನದವಡೆದ
ಕಾವ್ಯರಸಾಧರೆಯರೇ !

ಏಕೆ ಮೌನವಾಂತಿಹಿರಿ,
ಏನು ಯೋಚಿಸುತ್ತಿಹಿರಿ ?
ಎತ್ತ ಚಿತ್ತ, ಎಲ್ಲಿ ದೃಷ್ಟಿ,
ಯಾವ ಸೃಷ್ಟಿ ಯಾಕೃಷ್ಟಿ ?

ಸೊಗವೆ ಮುದವೆ ನಿಮಗೆ ಮತ್ತೆ
ಬಿಡುವು ಬೇಕೆ, ಕೆಲಸವಿಹುದೆ ?
ಹದವಿಲ್ಲದ ವಿಧವಿಹುದೇ,
ಇದು ಯಾವ ಪರಿ ?

೨

ಸುಲಿಪಲ್ಗಳ ನಲವಿಗೆ ಆ
ಎಳಮಿಂಚಿನ ಕೆನ್ನೆಗೆ,
ಪುಳಕೋದ್ಗಮ ಜಲಭರವಹ
ಕಂಗಳ ಕಿರುಸನ್ನೆಗೆ—

ಅರ್ಥವೇನು ? ಮೂಕಭಾವ
ನಡೆಯದಿಲ್ಲಿ, ಮಾತೆ ಜೀವ ;

೧೭

ಒಡೆಯದಿರೆ ಗುಲಾಬಿ ಮೊಗ್ಗೆ
ತಡೆ ಯಾವುದು, ಏನು ಎಗ್ಗೆ ?

ಚಂಚಲದ ದೃಗಂಚಲದಲಿ
ಹೊಂಚುವ ಹಿರಿಯಾಸೆಯೇನು ?
ಹೇಳದ ನುಡಿ ಕಾಣದವನ
ಬಯಸುತ್ತಿಹುದೆ ?

೩

ಅಮ್ಮನಿಗೆ ಸಹಾಯವಾಗಿ
ನಿಲ್ಲಬೇಕೆ ಮನೆಯಲಿ ?
ಗೆಳತಿಯರೇಂ ಕಾದಿರುವರೆ
ಲೀಲೆಗಾಗಿ ಮರೆಯಲಿ ?

ಏನು ಮತ್ತೆ ಸಮಾಚಾರ ?
ಅಲ್ಲ ; ಬೇರೆಯಿದೆ ವಿಚಾರ !
ನಿನ್ನೆ ತಿಳಿದೆ ಸುದ್ದಿಯನ್ನು—
ನಿಮ್ಮೊಳೊಬ್ಬ ಗೆಳತಿಯನ್ನು ,

ಬರುವನಂತೆ ನೋಡಲು ವರ ;
ಅಯ್ಯೊ ನನ್ನ ಮೆಚ್ಚುಗಳಿರ
ಜೀವನದಲಿ ಇದೇ ಮಧುರ
ಬೇರೊಂದಿಲ್ಲ !

———

# ಮಿತ್ರನಿಗೆ ಪತ್ರ

ನಿನ್ನೆದೆಯಾದರ್ಶದಲ್ಲಿ ಮಿಂಚಲೆನ್ನ ಚಿತ್ರ
ಧನ್ಯನಹೆನು ; ಹೊನ್ನಹುದೀ ಬಡಮಿತ್ರನ ಪತ್ರ || ಪ ||

ಭಾವ ಭಂಗಿ ನಿನ್ನದೊಲವೆ ಜೀವಸಂಗಿಯಾಯ್ತು,
ನಾವೆ ನೀನೆ ಬಾಳ್ಗೆ, ನಿನ್ನ ನೆನಹೆ ನಿತ್ಯವಾಯ್ತು ;
ಹರುಷರಸದ ಲಹರಿಯಾಗಿ ಬಂದು ನನ್ನ ಎದೆಗೆ
ಸ್ಪರುಶವಿತ್ತೆ ; ಭಾವವೆನ್ನದೇರಿತು ಮೇಲ್ತುದಿಗೆ!

ಕಣ್ಣಮುಂದೆ ಕುಣಿವ ಮಿತ್ರಜೀವವೆ ನಿನ್ನಾಣೆ
ನಿನ್ನನುಳಿದು ಮತ್ತೊಬ್ಬರ ಕನಸಿನೊಳೂ ಕಾಣೆ!
ಅಂಟಿಗೆ ಅಂಟಾಗಿಹುದೀ ಮನವೆರಡರ ಬೆಸುಗೆ
ನಂಟೀತಕೆ ಮಿಕ್ಕೋಜೆಯ ಬೆಳಕಿರಲೆನ್ನಸುಗೆ!

ರಾಗವೊಂದು ರಸವಿದೊಂದು ತಾಳ ಲಯುಗಳೊಂದು
ಮಾಗಿದೊಲುಮೆ ಹದವಿದೊಂದು ಜೀವದೈಕ್ಯವಿಂದು ;
ಮಧುರ ಮಧುರ ಮಧುರ ಮಧುರ ಮೈತ್ರಿಯೊಂದೆ ಮಧುರ,
ಅದರ ನುಡಿಯ ಸವಿಯದವನು ಕಿವಿಯಿದ್ದೂ ಬಧಿರ!

ಯುಕ್ತಿಯಿಲ್ಲ ಸಂತಸಕ್ಕೆ ತಪ್ಪಿಸಿಕೊಂಡಿರಲು,
ಶಕ್ತಿಯಿಹುದು ರಕ್ತಿಗಾ ವಿರಕ್ತಿಯ ಮೀರಿಸಲು ;
ಕವಿತೆಯನ್ನು ಕಡೆಯೆ ಬಂತು ರಾಗದ ನವನೀತ
ಹವಿಸೃಷ್ಟಿಗೆ ಬಾಳೊಟ್ಟನ ಮರ್ಮರ ಸಂಗೀತ!

---

## ಅಲ್ಲಿ ತೆರಳು ರಸಿಕ

ಎಲ್ಲಿ ರಾಗ ಮೇಲವಿಹುದೊ ಫುಲ್ಲ ಕುಸುಮ ವದನವಿಹುದೊ
ಮೆಲ್ಲ ಮೆಲ್ಲನೆಲರು ತಣಿವ ಸೂಸುತಿರುವುದೋ
ಎಲ್ಲಿ ಹೃದಯಕೊಂದು ಹೃದಯ ರಾಗಬಂಧ ಬೆಸೆಯುತಿಹುದೊ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ ?

ಸೊಗವ ಹಾಸಿ ಒಲವ ಬೀಸಿ ನಲವ ನುಣಿಸಿ ದಣಿವ ಹರಿಸಿ
ಮೊಗವ ಮಿಂಚಿ ಹೊಂಚಿ ಕಾಂಬ ಕಂಗಳಿರುವೆಡೆ—
ನೆಗೆದು ಹಾರಿ ನಡೆವ ಮನವು ಮುಗಿಲ ಹಾರಬಲ್ಲುದೆಲ್ಲೊ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ ?

ತೆರೆಗೆ ತೆರೆಗೆ ಜೇರ ಜೇರೆ ಭಾವಭಂಗಿಯಿಂದ ಸುಳಿದು
ಬೆರೆವ ಕಡಲ ದಂಡೆಯನ್ನು ತಬ್ಬಿಕೊಳ್ಳುತ,
ತೆರೆಯ ಸೆರಗ ಹಾಸಿ ಬರುವ ನದಿಯ ತರಳ ಗಮನವೆಲ್ಲೊ
ಅಲ್ಲಿ ತೆರಳು ರಸಿಕ, ಇಲ್ಲಿಗೇತಕೆ ?

ದಂತಧವಳ, ದಂತಪಂಕ್ತಿಗಿಂತ ಧವಳ ಮುಗುಳುನಗೆ, ನಿ-
ರಂತರಾಯವಾದ ಕೂರ್ಮೆಯದಕು ಧವಳವೋ !
ಅಂತರಂಗ ಕುಂದ ಕುಸುಮವಂತು ಅರಳುತಿರುವುದೆಲ್ಲೊ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ ?

ಎಳ್ಳಿನಂತೆ ಚುಕ್ಕೆಯಿದ್ದು ಬೆಳ್ಳಿಯಂತೆ ಬೆಳಕ ಸುರಿಸಿ
ಬಳ್ಳಿಯಂತೆ ಮನವ ಮಾಡಿ ಮಿಳ್ಳನಲೆಯುವ

ಹಳ್ಳಿಯೂರ ಮುಗಿಲು ತೆಳ್ಳತೆಳ್ಳಗಾಡಿ ಬರುವುದೆಲ್ಲೊ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ?

ಹಕ್ಕಿ ತನ್ನ ಪಕ್ಕಬೀಸಿ ಹೊಕ್ಕು ಹಣ್ಣ ರಸವ ಹೀರಿ
ತೆಕ್ಕನೆದ್ದು ನಡೆಯೆ ಕಾಂಬ ಒಕ್ಕಲಾಕೆಯು
ಅಕ್ಕರೆಯಲೆ ಆಕೆಯಾತ ಸಕ್ಕರೆಯುಸು ಸವಿವನೆಲ್ಲೊ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ?

---

# ಭರತ ಮಾತೆ

ಮಂದ ಮಂದ ವಿಳಾಸರಂಜಿತ ಸುಂದರಾಯುತ ದೇಹವು
ಚಂದ್ರಬಿಂಬ ಸಮಾನ ಕಾಂತಿಯು ಪೆತ್ತ ದಂತ ಸಮೂಹವು
ಬನದ ದೇವತೆಯಂತಿಹ–ಮುನಿಯು ಜೀವಿತವಾಗಿಹ
ಚೆಲುನಿನಾಗರವಾದ ದೇವಿಗೆ ಒಲುವು ಚುಂಬಿಸಿದಾಕೆಗೆ!

ನುಣ್ಣನೆಲ್ಲೆಡೆ ಹರಿದು ಹಾಸಿದ ಕೇಶರಾಶಿಯು ಮಧ್ಯದಿ
ಕಣ್ಣಗೊಪ್ಪಿಹ, ಕೊಳದ ತಾಯ್ವನೆಯಲ್ಲಿ ತೂಗುವ ಬಾಗುವ
ಚಿನ್ನದಾವರೆ ಸೊಂಪಿನ–ಕಾಡ ಬಳಗದ ಸೈಪಿನ
ಮೊಗದ ಮಾಟವ ಬಗೆಯ ನೋಟವ ಬಲ್ಲಿರೇ ಸುಕುಮಾರಿಯ?

ತಿದ್ದಿ ನಿಲ್ಲಿಸೆ ಕುಂಕುಮವನಾ ಕೇತಕೀಸಮಭಾಲದಿ
ಮುದ್ದಿಸಲು ಕನ್ನಡಿಯನೆಯ್ತುರುತಿತ್ತು ಬಿಂಬವು ಉಸಿರಿರೆ!
ಜಡವ ವಿಹ್ವಲಗೊಳಿಸುವ–ಬಲವು ಮಾಧವ ಮಿತ್ರಗೆ
ಇರಲು ದರ್ಪಣದರ್ಪವನು ಮುರಿದೊಗೆಯುತ್ತಿದ್ದನು ನಿಮಿಷದಿ!

ಪಂಚಮಸ್ವರದಿಂದ ಹಾಡದೆ ಜವ್ವನವು ಜಡವಾಗಿದೆ
ಮಿಂಚಿನಡೆಯೆ ಹಸಾದ ಲಜ್ಜೆಯು ಮೊಗವ ಬಣ್ಣಿಸದಾಗಿದೆ;
ಚಂಚಲತೆಯಿರದೀಕ್ಷಣ–ಒಲವು ಕುದಿಯುವ ಲಕ್ಷಣ,
ಪಂಚಬಾಣವ ಮಾಟದಾಟವ ನೆನೆನೆನೆದು ಹಂಬಲಿಪುದು!

ಭ್ರೂವಿಳಾಸ ವಿಲಕ್ಷಣೇಕ್ಷಣ, ಆವುದೊಂದನು ಅರಿಯಳು,
ಭಾವಹಾವಗಳೊಂದುಗೂಡುತ ಸೆರಗನಾಶ್ರಯಿಸಿರುವುವು;

ಆವಲೋಕದ ಅಮೃತವೋ–ಆವಜನ್ಮದ ಸುಕೃತವೋ
ಕಾವುಗೊಂಡುದರದಲಿ ಹೊಳೆದಿರಲಾದಳವಳಲಸೇಕ್ಷಣೆ!

ಕುಣಿವೆಳವೆ ಕಳೆದೆಯ್ದಿ ಯೌವನಫಲವೆದೆಯೊಳೆರಡಾಗಿದೆ,
ತಣಿಹವರಸುವ ಬೇಗೆಯೊಡಲೊಳಗೆದ್ದು ಹಾಯ್ದಾವರಿಸಿದೆ;
ಅಣಕ ಗಿಣಕಕೆ ಹಿಗ್ಗುವ–ಮುನಿಸು ಮೌನಗಳೊಗ್ಗುವ
ಹೊಸಹರೆಯದುತ್ಸಾಹವಳಿದಾಯಸದಿರಕೆ ನೆಲೆಗೊಟ್ಟದೆ!

ಪ್ರೇಮಫಲ ಕಳಿತಿರುವುದೋ ಎನೆ ಕಾಣುವುವು ಚೆಂದುಟಿಗಳು,
ವಿರಹದಿಂದೆದೆ ಮರುಗಿ ಕರಗಿದೆ ತುಂಬುಗಂಬನಿ ಕಂಗಳು;
ಪ್ರೇಮ ಸುಳಿದೆಡೆಗಾಣದೆ–ನಾಯಕನ ಸುಳಿವರಿಯದೆ
ವಿರಹಗೀತವ ಹಾಡುವುದೊ ಎನೆ ಪಳಪಳಿಸಿ ಬಿಸುಸುಯ್ವಳು!

ಓರಣವು ತನ್ನೊಡತಿಯೊಲಿಯದ ಕಾರಣವ ಕೇಳುತ್ತಿದೆ,
ಸಾರಣೆಯು ಕಾರಣೆಯು ಕಾಣದೆ ಕದಪುಗಳು ಕಳೆಗುಂದಿವೆ;
ಪಾರಣೆಯ ಬಯಸುವುದೆದೆ–ಪ್ರಣಯ ಪಾವಕ ಕೆರಳಿದೆ,
ಬಾರಿಸುವರಾರಿಲ್ಲದಿರೆ ಮನಕೊರಗಿ ಮೆಯ್ಗರೆಯುತ್ತಿದೆ!

ತಂಬೆಲರ ತೀಟದಲಿ ತೀಡುವ ಹುಲ್ಲೆಯಾಟದ ಮಾಟವು
ತುಂಬಿದುದು ತುಳುಕಿತು ತಿರೋಗತಿವಿಡಿಯೆ ನಲ್ಲನ ಬೇಟವು;
ಇಂಬುಗಳೆದಿರಲಾಸೆಯು–ಅರತು ಹೋದುದು ಬಾಸೆಯು,
ನಂಬಿಗೆಯು ಹಿಡಿವಗ್ಗತಪ್ಪಿದ ತಂಬಿಗೆಗೆ ಸಮವಾದುದು!

ಪುಣ್ಯ ಪುಳಿನಸ್ಥಳದೊಳಾಡುತ ತರುಲತಾ ಸಂತಾನಕೆ
ಕಣ್ವಸುತೆ ಕರುಣವನು ಸುರಿದಾದರಿಸಿದಳು ಸಂತಸದಲಿ;
'ಪೆಣ್ಣೆ ಸುಖಿಯಾಗೆನ್ನುವ'–ಅವುಗಳಾಶೀರ್ವಚನವ
ತಣ್ಣಗಾಗಿಸಿತೇನೊ ಬಿದಿ ಅದಕಾವುದೆಣೆಯುರ್ವರೆಯಲಿ?

ಪಾವನಕೆ ಪಾವನವೆನಿಪ್ಪ ತಳೋದರಿಯ ಮೊಗ ಬಾಡಿದೆ,
ತಾವರೆಯ ತಣ್ಣೆಲೆಯ ಗಾಳಿಯು ತಾಪವಾರಿಸದಾಗಿದೆ;

ಜೀವನವೆ ಜಡವೆನಿಸಿದೆ–ಸೊಗವು ಕನಸೆಂದೆನಿಸಿದೆ,
‘ ಕಾಣುವೆನೆ ನಲ್ಲನನು ? ’ ಎಂದೆದೆ ಕಳವಳಿಸಿ ಕಂಗೆಡುತಿದೆ !

ಆ ರಿಸಿಗಳೆಲೆವನೆಯೊಳಾಡಿದ ಭಾರತಾಂಬೆಯ ಹೃದಯವು
ತೋರದೋಳ್ಗಳ ನೀಡಿ ತನ್ನನು ಕಾಯುವಾಹವಮಲ್ಲನ,
ಧೀರತೆಯ ಪೇರಾಳ್ತನ–ವ್ಮೈದಳೆದ ದುಷ್ಯಂತನ
ಕೋರುವುದು ; ಅವನೆಲ್ಲಿರುವನಾ ವೀರನೆಂಬುದ ಕಾಣಿರೇ ?

———

## ಮೂಡಿತ್ತದೊಂದು ದಿವ್ಯ ಪ್ರಭೆ !

‘ ಪಾರಿವಾಳದ ಕೊರಳ ಕೊಂಕಿನಲಿ ಬಾ ಚೆಲುವೆ,
ನವಿಲುಗಂಗಳ ತೂರಿ ಬರಲಿ ದೃಷ್ಟಿಯೊಳೊಲುಮೆ ;
ಹಂಸಗತಿಯಲಿ ಹಾರಿ ಬಾ ನನ್ನ ಕಂಗೊಳಕೆ,
ಹರಿದು ಹರಿಸಾರಾಮದಲ್ಲಿ ವಿಹರಿಸು ಬೆಳಕೆ :
ತಿಳಿಯಾಗಿ ತನಿಯಾಗಿ ಮನವಾಗಿ ಮೈಯಾಗಿ
ಹೊಳೆಯಾಗಿ ನೆರೆಯಾಗಿ ಬಾ ಚೆಲುವೆ ನಡುತೂಗಿ ! ’

ಎಂದು ನೆನೆಯಲು ಮನದ ಮಂದಿರದಿ ಮಿಂಚಿದ್ದು
ಬಂದಂತೆ ಮೂಡಿತ್ತದೊಂದು ದಿವ್ಯಪ್ರಭೆ ! ಮ–
ರಂದ ಜಿನುಗುವ ಹಾಗೆ ಜಿನುಗಿ ಬಂತೊಂದು ರಸ ;
ಚಂದ್ರಿಕಾಪ್ಲಾವಸಮ ತಂಪಿನಲಿ ಮೈಮರೆದು
ಅಮಲತೆಯ ಮೈವೆತ್ತು ಮಿನುಗಿ ಸುಪ್ತಿಗೆ ಸಂತು–
ಕಮಲ ಕೋಮಲವಾಯ್ತು ಹೃದಯವಾಮಯವಳಿಯೆ !

ತಪ್ತ ಜೀವಕೆ ತಣಿವ ಪಡೆಯ ಹೇಳಿತು ದೀಪ್ತಿ–
‘ ಆಪ್ತ ಜೀವದ ನೆಚ್ಚಿಗಿಂತಮೃತ ಬೇರಿಲ್ಲ ;
ಅದನುಂಡು ತಣಿ ಜೀವಿ, ಹಾರಿಲ್ಲದೊಡೆ ಬಾವಿ !
ಅದೆ ಭುಕ್ತಿ ಅದೆ ಶಕ್ತಿ, ಅದೇ ಜೀವನಾಧಾರ,
ಮುದವೀವ ಮಂದಾರ, ಕಮಲಿನೀ ಕಾಸಾರ–
ಅದು ಲಭಿಸೆ ಬಾಳು ಹೊಂಬಾಳು ; ಕಳೆದೊಡೆ ಹಾಳು ! ’

———

# ಪ್ರೀತಿಯ ನೆನೆನೆನೆವೆ . . .

ಪ್ರಾಸಪಂಕ್ತಿಗಳಲ್ಲಿ ಲೇಸಾಗಿ ಎದೆಯೊಲವ
ಹಾಸು ಹೊಕ್ಕಾಗಿ ಹರಿಯಿಸಿದ ನಲ್ನುಡಿಯ
ಬೇಸಾಯದವರು ನೀವಯ್ಯ !

ಅಣ್ಣನಂದದ ನಿಮ್ಮ ಕಣ್ಣನೋಟದಿ ಅಳಲ
ತಿಣ್ಣವನು ಮರೆಸಿ ಮುಗುಳ್ನಗೆಯ ಮೊಗದಲ್ಲಿ
ಬಣ್ಣಿಸಿದ ಸಖರು ನೀವಯ್ಯ !

ಚಿತ್ತ ಚಂಚಲವಾಗಿ ಕತ್ತಲೆಯ ಕಾಡಾಗಿ
ನಿತ್ಯ ನಿರ್ವೇದವೊದಗಿರಲು ಮನಕಮೃತ–
ವಿತ್ತು ಪೊರೆದವರು ನೀವಯ್ಯ !

ಹೊಗಳಿಕೆಯು ಹೆಚ್ಚಲ್ಲ ಹಗಲಿರುಳು ನೀವ್ ತೋರ್ದ
ನಗುಮೊಗವ ನೆನೆದು ಇಲ್ಲವಾಯ್ತೆಂದೀಗ
ಮಗುವಾಗಿ ಅಳುವೆ ಸಿರಿಯಣ್ಣ !

ಅಚ್ಚನೇಹದ ಮಾತು ಬಿಚ್ಚಿದೆಯ ಕಡೆಯಿಂದ
ಹುಚ್ಚು ಹರಿಹದಲಿ ಬಂದೆನ್ನ ಮೀಯಿಸಿದ
ಸ್ವಚ್ಛತೆಯ ನೆನೆವೆ ಸಿರಿಯಣ್ಣ !

ಮಾತಿಂಗೆ ಮೀರಿದೊಳುವಾತಿನಿಂದುಪಚರಿಸಿ
ಓತು ಕರೆದೆನಗೆ ನಲುಮೆವಾಲೀಂಟಿಸಿದ
ಪ್ರೀತಿಯನೆ ನೆನೆವೆ ಸಿರಿಯಣ್ಣ !

ಚಂದ್ರಮಲ್ಲಿಗೆ ದಂಡೆ ಮುಡಿದ ಆ ಹೆರಿಗಂಗೆ
ಮಂದ್ರನಿಸ್ವನದಿ ನುಡಿವಂತೆ ನುಡಿವ
ನಿಮ್ಮಂದವನೆ ನೆನೆವೆ ಸಿರಿಯಾಣ್ಮ!

ಹತ್ತು ಸಾವಿರ ಹೊನ್ನು ತೆತ್ತರೂ ಸಿಗದಯ್ಯ
ಚಿತ್ತವೇ ಮುತ್ತು ನಿಮ್ಮದೋ ನೇಹಿಗರೆ,
ಮತ್ತದನೆ ನೆನೆವೆ ಸಿರಿಯಾಣ್ಮ!

ಅಂಗಡಿಯೆ ಅಮರರಾರಾಮವಾಯ್ತೆಂದಾವು
ಹಂಗುಹರಿಯಿರದೆ ಟೀಕಿಸುತ್ತಿರೆ ಜನದ-
ಜಂಗುಳಿಯನೊಂದೆ ಸಮನಾಗಿ!

ನಾನು ನೀನುಗಳಳಿದು ಜೇನು ಜೇನಾಗಿ ಮು-
ತ್ತೇನು ಇರದಾಗ ಚಿತ್ರಪತ್ರಕ್ರೀಡೆ
ತಾನಾಯ್ತು ನಮ್ಮ ಬೆಸೆವಂಟು!

ಸಂಜೆವೆಣ್ಣಿನ ಜೊತೆಗೆ ಮಂಜುಳಾಂತಃಕರಣ
ರಂಜಿಸುವ ಚಿಕ್ಕ ರಮಣಿಯರು ಬರುತಿರಲು
ಭುಂಜಿಸಿದೆವವರ ನಗು-ನಾಣು!

ಆಟ ರಸಿಕರ ಹೂಟವಾಯ್ತಯ್ಯ ಆಗ ' ಜಾ-
ಕೇಟಗ 'ನ ಜಾಣು ಬದಲಿಸಲು ಸುದತಿಯರ
ನೋಟವನೆ ನಮ್ಮ ಕಡೆಗಾಗಿ!

ಕನ್ನಡದ ' ಹೆಜ್ಜಾಣ ' ಮುನ್ನ ಸಾಲೆಗೆ ಬರುವ
ಚೆನ್ನೆಯರ ಬೆಡಗ ಬಣ್ಣಿಸುವ ಬಿನ್ನಾಣ
ಕನ್ನೆಯರೆ ನಾಚುವಂತಿತ್ತು!

ಕಂಪಿಗಾಸರೆಯಾದ ಸಂಪಿಗೆಯು ದೆಸೆಯಿಂದ
ಸೊಂಪು ಸೊಕ್ಕಿತ್ತು, ರಸವಾಕ್ಯ ಸೇವನೆಯು
ತಂಪು ತಲೆಗೇರಿ ನಡೆದಿತ್ತು!

ನಮ್ಮ ಮೂವರ ರಸನೆಗಾಸರೆಯನೊಡರಿಸಿದ
ಗಮ್ಮತ್ತಿನಾಕೆ ಗಮನಿಸುವುದನೇ ಕಾಂಬ
ನಮ್ಮ 'ಸೂಜಿಗ'ನ ಸೊಗಚಂದ!

ಬೆಳಕುಕತ್ತಲಹಾಗೆ ತಿರುಗಲಾಸೆನಿರಾಸೆ
ಅಳುಕದೆಯೆ ಬೆಳಕ ಹುಟ್ಟಿಸುವೆವೆಂದೆಮ್ಮ
ಮಿಳಿರುವಬ್ಬರದ ನುಡಿಚಂದ!

ಚಿತ್ರಜನ ಕಡೆಗೊಮ್ಮೆ ಚಿತ್ರಜಾರಿಯನೊಮ್ಮೆ
ವ್ಯತ್ಯಾಸವಿರದೆ ನೋಡಿದೆವು; ಆಯೋಗ
ಸತ್ವಾಭಿರಾಮ ವಹುದಯ್ಯ!

ಆ ಬಗೆಯನಾಸೊಗವನಾರೀತಿನೀತಿಗಳ-
ನಾಬಾಲವೃದ್ಧರುಚಿರೋಕ್ತಿ ವೈಖರಿಯು-
ನೇ ಬಣ್ಣಿಸುವೆನು ನುಡಿಯಿಂದ!

ಅಂದಿನಂದವನೆಲ್ಲ ಇಂದು ನಿತ್ಯವು ನೆನೆದು
ಅಂದೆಲ್ಲ ಅಳಿದು ಇಂದಾದುದೇಕೆಂದು
ಚಂದ್ರಶೇಖರಗೆ ಮೊರೆಯೀವೆ!

ಆ ಕಾಲವೇ ಮತ್ತೆ ಮೂಡಿ 'ಸೂಜಿಗ' ರಾಯ
ರಾಕೆಯೊಡಗೊಂಡ ಶಶಿಯಾಗಲಯ್ಯ ತ-
ನ್ನಾಕೆಯನು ಕೂಡಿ ನಲವಿಂದ!

ಬಾನುಬಯಲುಗಳಳತೆಮಾಡಿ ಮುಂದಕೆ ಹಾರಿ
ಏನು ಮತ್ತೆಂದು ಜಿಗಿದುನಿಂದುತ್ಸಾಹ
ತಾನೊಮ್ಮೆ ಬರಲಿ ದಯಮಾಡಿ !

ಹೊತ್ತು ಹೋಯ್ತೇಕೆಂದು ಮತ್ತೆ ಮತ್ತೆಡಬಲಕೆ
ಕತ್ತೆತ್ತಿನೋಡಿ ಮಾತು ಪೂರೈಸದಿರೆ
ಚಿತ್ತೈಸದಾತ ದಯಮಾಡಿ !

ನಿನ್ನೆತಳಪಾಯದಲಿ ಮುನ್ನಿನಶ್ಮಗಳಿಟ್ಟು
ಚೆನ್ನಾಗಿ ಇಂದನಳವಡಿಸಿ ಕಟ್ಟಿದಾ
ಚೆನ್ನಿಗರೆ ಬನ್ನಿ ಮನೆಗಾಗಿ !

ಹೃದಯ ವೇದಿಕೆಯಲ್ಲಿ ಮೃದುಮಧುರ ಭಾವಗಳ
ಹದನಾದ ಪಾಕ ನಿಮಗಾಗಿ ಕಾದಿಹುದು
ಚನುರರೇ ಬನ್ನಿ ಮನೆಗಾಗಿ !

ಮಿತ್ರಯುಗಳವೆ ನಿಮ್ಮ ಪತ್ರಕ್ಕೆ ಕಾದಿರುವೆ
ಹೃತ್ಕಮಲವನ್ನೆ ಬಾನಾಗಿ ಹಿಗ್ಗಿಸಿಹೆ
ನಿತ್ಯ ಸ್ವಾಗತವು ನಿಮಗೆಲ್ಲ !

———

## ವಿಗ್ರಹಭೇದನ

ಎಲೆಮನ ನಿನ್ನೆಳೆದಾಟವು ಕೊನೆಗಿಲ್ಲಿಗೆ ಬಂತೆ,
ಚೆಲುವೊಲವೆಂಬೊಳುನುಡಿಗುಡಿ ಹುಲುಕಸವೇ ಆಯ್ತೆ?
ಬಲು ನೆಚ್ಚಿದೆ ಹುರುಪನು, ಹುರುಪೆಲ್ಲಿದೆ? ಹುಸಿಕಂತೆ!
ಕಲುಗುಂಡನು ತೆಗೆದಪ್ಪುವ ಕಠಿನತೆ ಶರಣಾಯ್ತೆ?

ಹಾಲೀಜಗ, ಬೆಳುದಿಂಗಳ ನಲ್ಮೊಗವೆಂದರಿದು
ಬಾಲಿಶತನದಿಂ ಬಹುದಿನ ಕನಸಲಿ ಕಣ್ಮುಗಿದು,
ಕಾಲನ ವಂಚಿಸ ಹೋದೆಯ? ಅಕ್ಕಟ ನಿನಗೀಗ–
ಪಾಲಿಗೆ ಬಂತೇ ಶಿವಶಿವ ಹಾಲಾಹಲ ಯೋಗ!

ನಶ್ವರ ಕಹಿ ಬಾಳೆಂಬಾ ರಿಸಿಗಳನಬ್ಬರಿಸಿ
ಚಿಶ್ಛಾಂದಸ ಗೊಡ್ಡುಗಳೆಂದವದಿರ ಧಿಕ್ಕರಿಸಿ–
ವಿಶ್ವದೊಳಾಶಾಬಂಧವೆ ಸಂಜೀವನಿಯೆಂದೆ ;
ಆಃ ಶಿವಶಿವ ಕೊನೆಗೀಪರಿ ಶೂನ್ಯವೆ ಗತಿಮುಂದೆ ?

ಹೊಂಗನಸಿನ ಗೋಪುರಗಳ ಹುಡಿಮಾಡಿದೊ ಮನವೆ,
ಅಂಗಾಂಗವ ಭರ್ಚಿಗಳಿಂದಿರಿದುಕೊ ನಡೆ ಮನವೆ;
ಕಂಗಳ ಕವಡೆಯ ಕಿತ್ತಿಡು, ಕಲ್ಲದು ಕಣ್ಣಲ್ಲ,
ಮಂಗಳವನು ಮನೆಯಾಚೆಗೆ ಹೊಡೆದೋಡಿಸು ಹೊಲ್ಲ!

ನಿಷ್ಫಲ ನಿಷ್ಫಲ ನಿನ್ನೀ ಬಾಳಿನ ಹೋರಾಟ,
ದುಷ್ಪ್ರಾಪ್ಯವ ಬಯಸಿದೆನೀ ಸಲ್ಲದು ಆ ಹೂಟ;

ಬಾಷ್ಪವ ಹರಿಯಿಸಲೇತಕೆ? ಸೊನ್ನೆಯ ಸಂಸಾರ
ವಿಸ್ಫಾಲಿಸಿ ಪಕ್ಷಂಗಳ ಸೇರಿತು ತನ್ನೂರ !

ಫಡಫಡ ಬಯಲಾಸೆಗಳೇ ತೊಲಗಿರಿ ಸಾಲಾಗಿ,
ಜಡಿವೆನಮರ್ಷದ ಕೊಡಲಿಯ ನಡೆಯಿರಿ ಪಾಲಾಗಿ ;
ಜಡಭಾವದ ಹುಸಿನಾದವ ಮೆಚ್ಚಿದ ಮುಗ್ಧತೆಯೇ
ನಡೆ ಸಾರೀಯೆಡೆ ಸುಡುವುದು ನಿಜದೀ ನಗ್ನತೆಯೇ !

---

# ಬಲ್ಲೆಯ ಆ ನಲ್ಲೆಯ?

ಹಾಡುತಿರಲು ಅರುಣಗೀತ
ಹರಿಸದ ಹರಿಕಾರರು,
ಎಲರನೇರಿ ಮಲರ ಸಾರಿ
ಬರಲು ಮಧುಪ ವೀರರು;
ಮುಗಿಲ ತೆರೆಯ ಸರಿಸಿ ಹೊರಗೆ
ಉಷೆಯು ಮೊಗವ ತೋರಲು,
ಕತ್ತಲನ್ನು ಗುಡಿಸಲೆಂದು
ಮೂಡು ಹೊಸಿಲ ಮೀರಲು;
ಬಂದಳಲ್ಲಿ
ಬಾಗಿಲಲ್ಲಿ
ನವವಧು ನಿರಿಗಳನು ಚೆಲ್ಲಿ-
ಮುನ್ನ ತೋಳ ಸೆರೆಯೊಳಿದ್ದು
ಉಂಡ ಸೊಗವ ನೆನೆದು ನಕ್ಕು
ಇಹದ ಬೆಳಗನೊಮ್ಮೆ ಅಲ್ಲಿ
ಮರೆಯೆ ಭಾವದುದಯದಲ್ಲಿ,
ಉಷೆಯಣಕಿಸಿದಂತಾಗಲು
ಬೆಚ್ಚಿ ನಾಚಿ ನಿಂದಳು!

ಒಲಿದಧರವ ಕದ್ದು ಮೆದ್ದು
ಕನಸಿನೊಳಗೆ ಮಲಗಿದೆ
ನವಚುಂಬನಕಾರ ಬೆಳಗು
ಬೀಸಲೊಮ್ಮೆ ಅಲುಗಿದೆ;

ತೆರೆತೆರೆಯಲಿ ಕುಸುಮ ಸಾರ-
ವೆಬ್ಬಿಸ ಬರೆ ತಣ್ಣನೆ,
ಸರಿದೆನುಪ್ಪವಡಿಸಿ ಚೆಲುವಿ-
ನುಸಿರ ಹೀರಿ ಮಿಣ್ಣನೆ !
ಬಂದೆನಲ್ಲಿ
ಬಾಗಿಲಲ್ಲಿ
ಮಧುರ ಮನೋವೃತ್ತಿಯಲ್ಲಿ
ಮೊದಲು ನೆಟ್ಟ ಸೊಗದ ಬೆದೆಯು
ಕಂಡ ಹಾಗೆ ಕಳೆದ ಎದೆಯು
ಬಂದು ಜೀವನೈಕಸುಧೆಯು
ಕೆನ್ನೆಯಲ್ಲೆ ಅರುಣೋದಯು
ಸೆರೆಹಿಡಿದೆನು, ಬಲ್ಲೆಯೇನು
ಪ್ರೇಮದ ಆ ನಲ್ಲೆಯು ?

---

# ಮತಿ ಕೆಂಡವಾಯ್ತು

ಬಾಹ್ಯ ರಣರಂಗ ರಕ್ತೋತ್ಪಾತದುಬ್ಬರವು
ಮೆದುಳ ಕಾಯಿಸಿತು ಮರಳಿ,
ಆವ ಸಿದ್ಧಿಗೆ ತೊಡರಿ ಕಾದುವರೊ ಅದ ತಿಳಿದು
ಮತಿಕೆಂಡವಾಯ್ತು ಕೆರಳಿ!

ಕೊಂದು ತಿನ್ನುವ ಹುಲಿಗೆ ದಯೆಯನುಪದೇಶಿಸಲು
ಫಲವೇನು? ಫಾಲನೇತ್ರ
ಬಂದು ಕೆಂಗಣ್ಣುರಿಯ ಭುಗಿಲೆಂದು ಬಿಡೆ ತಿಳಿಗು
ಸೀದು ಸುಡುತಿರಲು ಗಾತ್ರ!

ದಂತವಳಿದರು ದರ್ಪವಳಿದೀತೆ ಸರ್ಪಕ್ಕೆ?
ದುರ್ನಯವು ದೂರಗಾಮಿ;
ಮಂತ್ರಕ್ಕು ಮುಗ್ಧವಾಗದು, ಮಾತ್ರನಿಲೆದೇಹ-
ಯಂತ್ರ ಬದುಕೀತು ಭೂಮಿ!

ತಾವು ಸಾಕಿದ ಕುರಿಯ ತಾವೆ ಕಡಿದುಂಬಂತೆ
ಕಡಿದುಂಬ ನರರ ನರವ-
ಬೇರು ಬೇರಗೆದು ಸುಡಬಾರದೇಕೆನಿಸುತಿದೆ
ಕತ್ತರಿಸಿ ಅವರ ಶಿರವ!

ಯಾವ ಕಾಲದೊಳೂ ಸ್ವಭಾವದುರತಿಕ್ರಮವು
ಅದಕಿರುವುದೊಂದೆ ಅಗದ,-

ಭಾವಕ್ಕೆ ಸಾಧನಾಭಾವವೆಸಪುದು, ಮಿಕ್ಕ
ಯಾವುದೂ ವ್ಯರ್ಥ ಜಗದೆ!

ಕೊಲ್ಲಬಹ ಕುನ್ನಿಗಳ ಕೊರಳನರಿವುದೆ ಧರ್ಮ
ತಿಳಿಯಿರಿದು ವೀರಯೋಗ;
ಅಲ್ಲದೊಡೆ ಈ ನರನ ಬಾಳು ಮಸಣದ ಹಾಳು;
ಕಿಡಿಗೊಡಲಿ ಖಡ್ಗವೇಗ!

---

# ಸೊಗಸುಗಾರ

ಹೃದಯ ಕುಮುದ ಚಂದ್ರಮಾ—
ಮುಗಿಲ ಮೊಗದ ತಿಲಕವೆನಿಪ ಸೊಗಸುಗಾರ ನೀತ,
ನಗೆಯ ಹಾಲ ಮೇಲೆ ನಿಂತ ನಿರ್ಮಲಕೆನೆಯೀತ ;
ಗಗನದಾಕೆಯಿಟ್ಟ ಬೆಳ್ಳಿಗಡಗವೆನ್ನು, ರೂಪ-
ಹಗಲ ಮರೆಸಿ ಸೊಗವನರಸಿ ಕೊಡುವ ಪುಣ್ಯದೀಪ !

ಅಂದಚಂದದಮೃತವೀಂಟಿ ತೊಳಗುತಿರುವ ರಾಜ,
ಸುಂದರಾಂಗ ಸುಜನ ಹೃದಯ ಪೆತ್ತ ಶಾಂತ ತೇಜ ;
ಶಿವನ ಜಡೆಯ ಕುಂದ ಕುಸುಮ ಮಾಲೆಯಿವನೆ, ಬಾಲ-
ಕವಿಯ ಕೆಣಕಿ ಕೆಣಕಿಹಾಡಿಸುವ ವಿನೋದ್ಮಶೀಲ !

ಹೃದಯ ಮಧುರ ಚಂದ್ರಮಾ—
ಶಾಂತನನಿಶ ಶಶಿ, ನಿಶಾವಿಹಾರ, ಸೌಖ್ಯಸಾರ,
ಕಾಂತಿಕಲಶ, ಕುಮುದದರಸನಮೃತಮಯ ಶರೀರ ;
ರಸಿಕ ಮನದ ಹರುಷ ನೀರನಿಧಿಗೆ ಚಂದ್ರಚಂದ್ರ,
ದೆಸೆಯ ಪೆಣ್ಗೆ ದುಗುಲಮಪ್ಪ ವಿಶದಕಾಂತಿ ಸಾಂದ್ರ !

ವಿರಹಿಮನಕೆ ತಂಪನಿತ್ತು ಕುದಿಸಬಲ್ಲ ಜಾಣ,
ತರುಣತೆಯೆದೆಯೊಳಗೆ ಬಿಡದೆ ನೆಡುವ ಪ್ರೇಮಬಾಣ ;
ತಾರೆಯೆರೆಯ ತಂಪಿಗೊಡೆಯ ತುಹಿನಧವಳ ಬಿಂಬ,
ಬಾರಿ ಬಾರಿಗೊಂದು ನುತಿಸುತಿದೆ ಜನ ನಿಕುರುಂಬ !

ಹೃದಯ ಗಗನ ಚಂದ್ರಮಾ—
ಚಂದ್ರ ಚಂದ್ರಿಕೆಯರ ಹಾಗೆ ನೀನು ನಾನು ಕಾಂತ,
ಚಂದ್ರಲೋಕಕೇರಿ ನಡೆವ ಬರಲು ಬಾಳಿನಂತ ;
ಬಂಧೆ ಬೆಸುಗೆ–ಪ್ರೀತಿನೀತಿಗೆರೆವ ಸ್ವೀರ ಸ್ವೀತ,
ಚಂದಗಾರ ಕೇಳು ನನ್ನ ಹೃದ್ವಿಪಂಚಿ ಗೀತ !

## ಸಿಡಿವುದೆನ್ನೀತಲೆಯು !

ಮನದ ಮುತ್ತಿನ ಮಣಿಯುಮಿಗೆ ನುಚ್ಚು ನೂರಾಯ್ತು,
ಹೃದಯಕ್ಕೆ ಸಿಡಿಲೆರಗಿಸುಟ್ಟು ಬಿಸುಟಂತಾಯ್ತು,
ಧಮನಿಧಮನಿಗಳಲ್ಲಿ ವಿಕಟ ನಾದೋತ್ಪಾತ
ಸಮನಿಸಿತು, ಆಹ ನೆತ್ತರನೆ ಕುದಿಸಿತು ; ಜೀವ
ತಳಮಳಿಸಿ ತಡವರಿಸಿ ಕಕ್ಕುಬೆಕ್ಕಾದುದುಪ-
ಟಳವ ತಡೆಯುವುದೆಂತು ? ಕಲಿಗೈಯ ಕಡುವರಸೆ
ಕಿವಿಯನೊಡೆವುದೊ ಎನೆ ಪಿಟೀಲಿನಲಿ ಮುರುಳಂತೆ
ತಿರುಗಿ ತಾಂಡವವಾಡುತಿಹುದು—ತಾಳ್ದಲಸಾಧ್ಯ !

ಎಲೆಲೆಸರಸತಿ, ನಿನ್ನ ಗೋಣ ಮುರಿವರೆ ಅಕಟ
ಕಲೆಗಾರರಲ್ಲಿವರು—ಕೊಲೆಗಾರರೇ ದಿಟವು !
ಕರ್ಣಕುಹರದೊಳುಕ್ಕು ಕಾದು ಹೊಕ್ಕಂತಾಯ್ತು,
ಮೆದುಳುಗೆರೆಯೊಳು ಸಲಗ ದಾಳಿಯಿಟ್ಟಂತಾಯ್ತು ;
ಚೆಲುವಿನೆದೆಯಲಿ ವಿಷಕಠಾರಿಯಿಡುವುದನೆಂತು
ಸಹಿಸುವೆನು ? ಮೃತ್ಯುಬಾ—ಸಿಡಿವುದೆನ್ನೀತಲೆಯು !

———

# ಹೃದಯ ಪರೀಕ್ಷೆ

ನಿನ್ನ ಹೃದಯ ಪರೀಕ್ಷೆಮಾಡಿದೆ-
ನೆಂದು ಬಗೆದೆನು ಸುಮ್ಮನೆ ;
ನನ್ನ ಹೃದಯ ಪರೀಕ್ಷೆಯಾಯಿತು
ಇಂದು ಕೇಳ ಸುಲೋಚನೆ !

ತಿಳಿದೆನೆಂದೆನು ತಿಳಿಯದೆಯೆ ಮೋ-
ಹಕ್ಕೆ ಪ್ರೇಮವನೆಣಿಸಿದೆ :
ಉಳಿದೆನೆಂದಳಿದೆನು, ಮಹಾಮತಿ-
ಯೆಂದು ಮಂದತೆಗೂಡಿದೆ !

ವಿಷವನಮೃತವೆಂದೊಂದು ಹುರುಪಿನ
ಬಟ್ಟಲಲಿ ಕುಡಿದಾಡಿದೆ,
ತೃಷೆಗೆ ದೈವದ ಕರೆಯಿದೆಂದುರಿ
ನಂಬಿ ನಾ ಹರಿದಾಡಿದೆ !

ಜಡವು ಜೀವವಿದೆಂದು ಭ್ರಮಿಸಿದೆ
ಬಳ್ಳಿವಳ್ಳಿಯ ಹೂಗಳ-
ನುಡಿಯನರ್ಥವ ಮಾಡಿಕೊಳ್ಳದೆ
ಕೊಯ್ದು ನೆನಗೆಂದವುಗಳ !

ದೈವಮಾಯೆಯನಿದಿರಿಸುವೆನೆಂ-
ದೆನ್ನಮಾಯೆಯಬೀರಿದೆ ;

ಏವೆನದರಲಿ ಬೆರೆದು ನನ್ನದು
ನನಗೆ ಕತ್ತಲ ಕಾರಿದೆ!

ಕಟ್ಟಿದಾಪಂಜರವನೊಳಗಡೆ
ನಿಂದು ಕೇಲಿಸಿ ನೋಡಿದೆ;
ಮೆಟ್ಟಿದರು ಮುರಿಯದು, ಅದೆನ್ನನೆ
ಕಟ್ಟಿ ಒಳಗಡೆ ಕೂಡಿದೆ;

ಎದೆಯ ದೇಗುಲದೊಳಗೆ ದೀವಿಗೆ
ಇರುವುದೆನಗೇ ಎಂದೆನು;
ಬಿದಿಯು ಗೂಢವ ಬಯಲಿಗೆಳೆಯಲು
ಅಲ್ಲವೆಂದುರೆ ನೊಂದೆನು!

ಮನವ ಮಾನಿನಿ ಮನನಮಾಡಿದೆ,
ಮಾಯೆಯನು ಈಡಾಡಿದೆ;
ಕನಸುಗಳ ಕುಡಿವೆನ್ನ ಮನವನು
ಕನಸಿಗೇ ಜೊತೆಮಾಡಿದೆ;

———

# ನಿಜದ ನುಡಿ

ಪರಿಪರಿಯ ಲೋಕದಲಿ ಪರಿದು ಪಲವಿಷಯಗಳ
ತಿರುಹಿನಲಿ ತೂರಿ ತಿಗ್ಮಾಂಶು ಬಾಧಿತನಂತೆ
ಬಳವಾಡಿಕೊಂಬೆಯೆಂಬೊಂದು ಬಯಕೆಯೊಳಿಂದು
ಕರುತಾಯಕಾಂಬತೆರದಿ,

ತಿರುಗಿ ನಿನ್ನಯ ನೆಳಲನಾಶ್ರಯಿಸ ಬಂದೆನಿದೊ
ತೆರೆದೆದೆಯೊಳಿಲೆ ಗೆಳೆಯ ಹಸಿದು ನೇಹದ ನುಡಿಗೆ,
ಹೆರರ ಹಾರೈಸಿದೊಡೆ ಬರಿನೀರ ಕಡೆದಂತೆ
ಎಂಬ ಸೊಲ್ಲಿನ್ನದಾಯ್ತು!

ಅಳಿನಂಟು ಬೇಕೆಂದೊಡೆಲ್ಲೆಲ್ಲಿಯೂ ಉಂಟು,
ಉಳಿನಂಟು ದಿವಿಜರಿಗು ವಿರಳವೈ ; ಕರಣಗಳು
ಕಳವಳಿಸಿ ಕತ್ತಲೆಯೊಳಾಳುತಿರೆ ಬಂದೆನಿದೊ
ಜೀವನಾಧಾರಕಾಗಿ ;

ಚೆಲುವು ಗೆಲುವುಗಳೆಲ್ಲ ದೊರೆಕೊಂಡರಿಲ್ಲಿ ತಿಂ-
ಗಳವೊಲಾತ್ಮಕೆ ಶಾಂತಿಯೀವ ಸಹೃದಯಭಾವ
ದೊಳುವಾತು ಕಾಣದಾಯ್ತಯ್ಯ ನೇಹಿಗರರಸ
ಹುಡುಕಿ ಹುಚ್ಚಾಗಿ ಹೋದೆ!

ಅರಸಿದರು ನನ್ನೆದೆಯ ಮಿಡಿತಗನುಗುಣವಪ್ಪ
ಸರಸಿ ಕಾಣನು ನಿನ್ನನುಳಿದು, ಜೀವಕೆ ಜೀವ
ಬೆರಸಿ ಮಾತಾಡಲೆಂದಿತ್ತ ಹರಿದೆಯ್ತಂದೆ
ಬಾ ಗೆಳೆಯ ಕರೆವೆನೊಲಿದು ;

ನೆರವೆನಗೆ ನೀನು ನಿನಗಾನೆಂದು ಬಗೆದು ಬಂ-
ಧುರವಾಗಿ 'ಸಂಸೃಷ್ಟಿ'ಯಂತೆ ಬಾಳುವ ಬಾರ
ಧರೆ ಮುಗಿಲು ರವಿಚಂದ್ರತಾರೆಗಳನೊಡಗೊಂಡು
ಹರ್ಷಸಂಫುಲ್ಲರಾಗಿ !

---

# ಧೀರ

ಸೃಷ್ಟಿಯಲಿ ಸಮಷ್ಟಿಯೊಳೆಲ್ಲದಕು
ತುಷ್ಟಿಯನೊಡರಿಸಲುಳಿಯದು ತೊಡಕು—
ದುಷ್ಟಾತ್ಮರ ಮುಷ್ಟಿಯೊಳಡಗಿಸದೆ
ಎಷ್ಟಾದರು ಬಿಡೆ ಮುಳಿದಬ್ಬರದೆ!

ಸಾಗರವನೆ ನೊಗೆವೆನು ಇದೆಯುದಟು,
ಯೋಗದಿ ಕಳೆವುದು ಈ ಜಗದೊಗಟು;
ಆಗಸದಲಿ ಅರಸುವುದೇಂ ಗೊರಟು?
ರಾಗರಸದೊಳಿದೆ ಜೀವದ ಜಿಗುಟು!

ತರ್ಜನಿಯಲೆ ತಿರೆಯನು ತಿರುಗಿಪೆನೆ,
ಅರ್ಜುನನನೆ ಬಿಲುವಿಡಿದೆದುರಿಪೆನೆ!
ಗರ್ಜನೆಯಲೆ ದುರುಳರನುರುಳಿಪೆನೆ,
ಪರ್ಜನ್ಯನ ಪರಿ ತಡೆಗಟ್ಟುವೆನೆ!

ದಿಗ್ದಂತಿಗಳೆಲುಬನು ಪುಡಿಮಾಡಿ,
ಮುಗ್ಧಾಂತಃಕರಣಕೆ ದಯುಗೂಡಿ,—
ಶ್ರದ್ಧಾವಂತರ ಬಳಗದೊಳಾಡಿ,
'ಇದ್ದೆನು ಮಾನವ' ಎನ್ನುವೆ ಪಾಡಿ!

ಪಾಳ್ಮಸಗಿದ ದೇಗುಲಗಳ ಕಂಡು
ಬಾಳ್ನಶ್ವರ ಎಂಬೀನುಡಿಗೊಂಡು,—
ಪಾಳ್ಮೊಗವನು ತೋರ್ಪನ್ನರ ಕಂಡು
ತೋಳ್ಚಪ್ಪರಿಸುವೆ ನಾನೇ ಗಂಡು!

ಪುರುಷತ್ವದ ಹಿರಿಮೆಯ ಮೆಯ್ಗೊಂಡು
ಹರುಷದಿ ಮಾನವತೆಯ ಫಲವುಂಡು,
ಧರೆಯಿರವಿನ ಸಾರ್ಥಕ್ಯವ ಕಂಡು—
ಮೆರೆಯುವೆ ತಾರುಣ್ಯದ ಕಲಿಗಂಡು!

ಎಲ್ಲಿದೆ ಹೆಂಬೇಡಿಗಳಿಗೆ ಬಾಳು?
ಎಲ್ಲಿದೆ ಸೋಮಾರಿಗಳಿಗೆ ಕೂಳು?
ಕಲ್ಲೆದೆಯಿಲ್ಲದ ನರನಿಗೆ ಗೋಳು
ಎಲ್ಲಿದ್ದರು ತಪ್ಪೀತೇ ಹೇಳು?

ಸಾರಸ್ವತ ಪರಿಣತಿಯಿರದಿರಲಿ,
ಊರನು ಕೊಳಬಹ ಧಟವಿರದಿರಲಿ—
'ಆರೆನು' ಎಂಬೀ ನೆವ ಬರಿ ಕುಂಟು!
ಧೀರತ್ವದ ಹಿರಿನಂಟೇ ನಂಟು!

ಈಶನ ಮಾಟದೊಳುಳಿದಿರುವೆಲ್ಲ
ದೋಷವ ತಿದ್ದದೆ ಬಿಡುವವನಲ್ಲ;
ಕಾಷಾಯದ ಯತಿ ನಾನೇನಲ್ಲ—
ರೋಷದೊಳೆದ್ದಿಹೆ ನಾಹವಮಲ್ಲ!

ಧಗಧಗಿಸುವ ಕೆಚ್ಚೆದೆಯೊಳಗುರಿಯು,
ಘಮಘಮಿಸುವ ನೇಹದ ನೆಯ್ಸುರಿಯು—
ಮುಗಿಲೋಳಿಯು ಮುಟ್ಟದೆ ಮನದಾಸೆ;
ಜಗದಗಲಕೆ ಬಗೆ ಹಬ್ಬಿಹುದೈಸೆ!

## ಜನ್ಮಕಥೆ

'ಬಂದೆನಾನೆಲ್ಲಿಂದ, ಎಲ್ಲಿಂದ ನೀಯೆನ್ನ
ನೆತ್ತಿಕೊಂಡ್ಯೆ ತಾಯಿ ಹೇಳು'–ಎಂದು
ಒಂದುಸಲ ಕೇಳಿದನು ತಾಯ ಸೆರಗನುಹಿಡಿದು
ಮಗು ಚಿನ್ನ ನಿಂದವಳ ಬೆನ್ನಹಿಂದೆ :
ಹಸುಳೆಯನು ಎದೆಗಪ್ಪಿ ಹರುಷದಿಂದ
ನುಡಿದ | ಳಳುನಗುಗಳರೆಬೆರೆದ ಕಂಠದಿಂದ :
"ಮಗುವೆ ಮುದ್ದಿನ ಕಣಿಯೆ ನನ್ನೆದೆಯ ಬಯಕೆ ನೀ–
ನಾಗಿದ್ದೆ ನನ್ನ ಬಾಳ್ಮೊದಲಿನಿಂದ !

"ನನ್ನೆಳವೆಯೊಳಗಾಡುತಿದ್ದ ಬೊಂಬೆಗಳಲ್ಲಿ
ನೀನಡಗಿ ನಿಂತಿದ್ದೆ, ಬಳಿಕ ನಾನು
ಮಣ್ಣಿನಲಿ ಶಿವಮೂರ್ತಿಯನು ರಚಿಸುತಿರುವಾಗ
ನಿನ್ನಮಾಡಿದೆನಳಿಯಿಸಿದೆನು ಮಗುವೆ ;
ನಮ್ಮ ಕುಲದೇವತೆಯ ಜೊತೆಗೆ ನಿನ್ನ
ಮುದ್ದು | ಮೂರ್ತಿಯನು ಪೀಠದಲಿ ಕುಳ್ಳಿಸಿದ್ದೆ–
ಕಂದಯ್ಯ ಆಕೆಯರ್ಚಣವೆಸಗುತಿರುವಾಗ
ನಿನ್ನ ಪೂಜಿಸುತಿದ್ದೆನೊಲವಿನಿಂದ !

"ನನ್ನವೆಂದೆನಿಸಿದ್ದ ಚೆಲುವನಲ್ಗನಸುಗಳ
ತಳ್ಕಂಕದಲಿ ಕುಳಿತು ನೋಡುತಿದ್ದೆ ;
ನನ್ನಾಸೆ ಕೂರ್ಮೆಗಳ ತಲ್ಪದಲಿ ತಣಿವಿಂದ
ಒರಗಿ ಮುಗುಳ್ನಗೆ ನಕ್ಕು ನಲಿಯುತಿದ್ದೆ ;

ತಾಯಿ ಮುತ್ತಾಯಿಂದಿರಿರದೊಳಿದ್ದೆ ;
        ನೀನು | ಮನೆಯನಾಳುವ ದೇವಿಯಂಕದಲ್ಲಿ
ಅಡಗಿದ್ದೆ ಪ್ರೇಮದರಗಿಳಿಯೆ ಮೋಹದ ಮುಗುಳೆ
        ಯುಗದಾದಿಯಿಂದ ಮನೆಮಾಡಿಕೊಂಡು !

" ಚಿಕ್ಕಂದಿನೊಳಗೆನ್ನ ಹೃದಯ ಹೂವಿನಹಾಗೆ
        ಅರಳುತ್ತಲಿರೆ ಮೆಲ್ಲಮೆಲ್ಲನೊಸೆದು,
ಹಕ್ಕೆಮಾಡಿದೆಯಲ್ಲಿ ಪರಿಮಳದ ರೂಹಿನಲಿ
        ಹಸುಳೆ ಹರ್ಷದ ಹೊನಲೆ ಆಗ ನೀನು ;
ನಿನ್ನ ಕೋಮಲ ಮಾರ್ದವವನು ಕೊಟ್ಟೆ
        ನನ್ನ | ತರುಣಗಾತ್ರಕೆ ನನಗೆ ಅರಿಯದಂತೆ ;
ಕರುಳೆ ಕರುಳಿಂದೊಗೆದ ವಾತ್ಸಲ್ಯದೊಳ್ಗೊಸೆ
        ಮರೆವು ಬಂದಾವರಿಸಿ ಮುಚ್ಚಿತದನು !

" ಹೊಳೆವ ಹೊನ್ನೊಡವೆಗಳ ಮುದ್ದುಕುವರನೆ ನೀನು
        ನಿತ್ಯನವಿಕಾರನುಷೆಗೋರಗೆಯಹೆ,
ಇಳೆಯ ಬರಿ ಕನಸುವಾಳ್ಕೆಡುವಿಂದ ಮಿಂಚಿದ್ದು
        ಆನಂದವರ್ಷಿಸಲು ಹುಟ್ಟಿಬಂದೆ ;
ಮಗುವೆ ಮಾಣಿಕವೆ ನನ್ನೆದೆಯ ಜೊತೆಗೆ
        ಆಡ | ಬಂದೆ ನಿಜವಸ್ತುವೊಂದಾಗಿ ಕಡೆಗೆ
ಮನವ ಹೊಕ್ಕೆನ್ನನುರೆ ಮೋಹಗೊಳಿಸಿದೆ ಮುದ್ದು
        ಮೋಹನನೆ ಮಂಜುಳಾಕಾರದಿಂದ !

" ನೋಡನೋಡುತ ನಿನ್ನ ಮುಗ್ಧ ಮುಖದಲಿ ನಲಿವ
        ಅದ್ಭುತ ವಿಳಾಸವನು ಅರಿಯದಾದೆ ;
ಎಲ್ಲರಿಗೆ ಸೇರಿದವನಂತಿರಲದೆಂತು ನೀ
        ನೆನ್ನವನೆನಿಪ್ಪೆ ಎಲೆಮಗನೆ ? ನಾನು

ನಿನ್ನುದರೊಳಿನ್ನೊಡಲ ಮುದ್ದಿಸುತಿಹೆ
ನೀನು | ಉದಯಿಸಿರೆ ತಾಯ್ಗೊಬ್ಬ ಪುತ್ರನೆನಿಸಿ,
ನಗುನಗುತ ಹಗುರವಾಗೆಯ್ತರಲು ಈ ಜಗಕೆ
ಮಗುವೆ ನೀನೊಮ್ಮೆ ನನ್ನುದರದಿಂದ !

“ ಕಳೆದುಕೊಂಡೇನೆಂಬ ಬೆದರಿಕೆಯ ಭರದೊಳಗೆ
ಎದೆಗೊತ್ತಿಕೊಂಡಿಹೆನು ಕಂದನಿನ್ನ ;
ಅತ್ತುಕೂಗುವೆನೊಂದುಗಳಿಗೆ ಪುತ್ಥಳಿ ನಿನ್ನ
ಮುದ್ದುಮೊಗವನು ಕಾಣಲಾರದಿರಲು ;
ಈ ನನ್ನ ಸುಕುಮಾರ ಹಸ್ತಗಳಲಿ
ಜಗದ | ಐಶ್ವರ್ಯಸಾರವನು ಸೆರೆಯಿಟ್ಟುದು
ಆವಮಾಯೆಯೊ, ಅದರ ಹುಟ್ಟುಗುಟ್ಟುಗಳಿರವು
ಮಗುವೆ ಎದೆಯೊಲವೆ ನನಗರಿಯದಿಹುದು ! ”

---

# ಅನುಭವ

ಕವಿಯಿರಲಿ ರವಿಯಿರಲಿ ಭವಿಯಿರಲಿ ಬುವಿಯೊಳನು
ಭವದ ಮಾತೇಮಾತು ಅರಿಯು ;
ಸವಿಯಿರಲಿ ಕಹಿಯಿರಲಿ ಅದನೊಪ್ಪದಿರಲಹುದೆ
ಸವಿದಹಣ್ಣಿನ ತಿರುಳರುಚಿಯು ?

ಕಲ್ಪನೆಯತಲ್ಪದಲಿಪವಡಿಸಿಹ ನುಡಿಗಳಿಗೆ
ಬಲ್ಬುತಿಳಿದೀತೆ ಅನುಭವದ ?
ಸ್ವಲ್ಪವಾದರು ಒಲಿದ ತೋಳ ತೊಟ್ಟಿಲೊಳಿರದ
ಅಲ್ಪಮತಿಗರಿಪೆ ಹೆಣ್ಬಿನದ ?

ಎವೆಯುಕ್ಕದೆಳನೀರ ನೋಡೆ ರುಚಿ ತಿಳಿದೀತೆ,
ಕವಿಯಾದರವನ ಹೆಚ್ಚೇನು ?
ನವನವೋನ್ಮೇಷಶಾಲಿಗಳಿಗೂ ಅನುಭವದ
ಕವನಕಾರರ ಮಾತೆ ಜೇನು !

ತಾನೀಂಟೆ ತಿಳಿದ ಮೊಲೆವಾಲ ಸವಿಯನು ಕಂದ
ಮೌನಹಾಸದಿ ತಿಳಿಸನೇನು ?
ತಾನಳೆದ ಅನುಭವದ ಸಾರವನು ಕಬ್ಬಿಗನು
ಹೇಳಲಮ ರಸಕಾಮಧೇನು !

ಬಿದಿಬರೆದುದೊಮ್ಮೆ ಬದಲಾಗಬಹುದೆಂದರೂ
ಎದೆಯೊರೆದುದೆರಡಾಗದಿಹುದು ;

ಚದುರನುಡಿಸಾಸಿರವ ಪೇಳಿದರೆ ಫಲವೇನು ?
ಎದೆಯಮಾತೊಂದೆ ದಿಟವಿಹುದು!

ಕದನದಿಂದಂಜಿಬಂದವನ ಬೆಳ್ನುಡಿಗಿಂತ
ಅದನೋಡದವನ ನುಡಿಕೀಳು;
ಉದಧಿಯಾಳದೊಳಿರುವ ನವರತ್ನಗಳಿಗಿಂತ
ಎದೆಯಾಳದನುಭವವೆ ಮೇಲು!

———



4

## ಬೆಟ್ಟಕುಳಿ

೧

ಹಸಿರ ಹಾಸಿನಲಿ ಹರಿದುಹೋದ ಮನ ಬಾರದಕ್ಕ ಹಿಂದೆ,
ಕ|ಣ್ಣೆಸುಗೆ ಕಾಣದಾಯ್ತನ್ಯ ವರ್ಣವನು ಬೆಟ್ಟಕುಳಿಯ ಮುಂದೆ!
ತಂಪ ತಣಿಸಿ ಕೊಡುವಂಥ ಚಮತ್ಕಾರಿ
ಹಸಿರನುಟ್ಟ ದಾರಿ,
ಹೂ|ಗಂಪನೆನಸು ಸೂಸುತ್ತ ಸುಳಿವಗಾಳಿ
ತುಸೂ ಇಲ್ಲ ಧೂಳಿ ;
ಚಿಕ್ಕ ಚಿಗುರುಗಣ್ಣರಳಿಸಿ ನಿಂದಿರೆ
ಬೆಟ್ಟದರಸನೊಡನಾ ಕುಳಿಯಿಂದಿರೆ,
ಮುಟ್ಟಿ ನಡೆವ ಮೆಲ್ಲೆಲರೆಯ್ತಂದಿರೆ,
ಎಷ್ಟು ಸೊಗಸು ನೋಡಕ್ಕ-
ಹುಟ್ಟು ಕುರುಡನೀನೆಲದಲಿ ನಿಂದಿರೆ
ದಿಟ್ಟಿ ಪಡೆಯದಿರನಕ್ಕ !

೨

ಕಡಲಿನಿಂದ ಧಡಲೆಂದು ತೆರೆಗಳಪ್ಪಳಿಸೆ ಸಪ್ಪಳಿತ್ತ
ಬೆಂ|ಬಿಡಿದು ಬಂದರೂ ಬೆದರದಿದರ ಈ ಶಾಂತವೀರ ಚಿತ್ತ !
ಅಲ್ಲಿ ಸಿಂಧುತಟದಲ್ಲಿರೆ ಹಾಹಾರಿ
ಧೈರ್ಯ ಹೋಯ್ತು ಜಾರಿ ;
ಈ|ಮಲ್ಲಿಗೆಗಂಪಿನ ಠಾವನೀಗ ಸೇರಿ
ತಣಿದನೀವಿಹಾರಿ

ದನದ, ಧನದ ಜನ ಮನದ, ವನದ ಚಂ-
ದನದ, ಚೆಲುವ ಚಪ್ಪರದ, ತಳಿರ ತೋ-
ರಣದ, ಬಸದಿ ಬಾವುಟದ ವೈಸಿರಿಯ
ಕುರುಹು ತೋರುತಿಹುದಕ್ಕ-
ಹಿಂ|ದಿನ ವಿಭೂತಿಯವಶೇಷದಿಂದ ಕ-
ಲ್ಪನೆಗೆ ಮೂಡಿತೇ ಪಕ್ಕ !

೩

ಕೃತಕ ಪೇಟೆಯಲಿ ಕೃತಕ ಜೀವಿಗಳ ಕೃತಿಯ ಕಂಡರೇನು ?
ಹರ|ಕೃತ ವಿಶಾಲ ವಿಪಣಿಯನು ನೋಡು ; ಸೌಂದರ್ಯರ್ಥೇನು
ಸಾನು !

ರಾಜ ರಾಣಿಯರ ರತ್ನ ಮಂಟಪಕ್ಕೆ
ಹಾಕಿದ ಯಮತೆಕ್ಕೆ ;
ನಿ|ರ್ವ್ಯಾಜರಮ್ಯ ಭೂರಮೆಯ ಸೌಂದರಕ್ಕೆ
ಆಗಲಿಲ್ಲ ಧಕ್ಕೆ !
ಹೊಳೆಯ ಹಳ್ಳಗಳ, ಮಳೆಯ ಕೊಳ್ಳಗಳ,
ಗಿರಿಯ ಮೋಡಗಳ, ದರಿಯ ಗೂಢಗಳ
ಮೆರೆವ ನೋಟದಲಿ ಹಸಿರ ತೋಟದಲಿ
ಹಾಯಲೆಷ್ಟು ಸೊಗಸಕ್ಕ-
ಇಳೆಯೆ ಸಾಕು ಮತ್ತಿದರ ಸುತ್ತ ಆ
ಸಗ್ಗವನ್ನು ಸುಳಿದಿಕ್ಕs !

೪

ಹಗಲಿನಲ್ಲಿಯೂ ಸೊಗಯಿಸುವೆನುಯೆಂದಾ ಸುಧಾಂಶುವಿಲ್ಲಿ
ಬಾ|ನಗಲಿ ಗುಡ್ಡಮೆಯ್ಗೊಂಡು ಬಂದನಿದೊ ಹರಿತವರ್ಣದಲ್ಲಿ ;
ಜಲಧಿಯಲ್ಲಿ ಜಲರೂಪ ಬೇಸರಾಗಿ
ತೆರೆಗಳಿತ್ತ ಸಾಗಿ

ತ|ಣ್ಣೆಲದ ಮೇಲೆ ಮಲಗಿಹವು ಬೆಟ್ಟವಾಗಿ
ಹಸಿರು ತಲೆಯ ತೂಗಿ
ಆತ್ಮ ಆತ್ಮ ಮಾತಾಡುವ ಮನೆಯಿದು,
ಪ್ರೀತಿ ಪ್ರೀತಿಯಲಿ ಬಿಟ್ಟಿಹ ತೆನೆಯಿದು,
ಧಾತ್ರಿದೇವಿಯೆದೆ ಸೊಬಗಿನ ಕೆನೆಯಿದು,
ಚೊಕ್ಕದಲ್ಲಿ ಬಲು ಚೊಕ್ಕ–
ಪರ|ಮಾತ್ಮನೆಡೆಗೆ ಸೋಪಾನ ಪಂಕ್ತಿಯಿದು
ನೋಡ ಬಾರ ನನ್ನಕ್ಕ!

## ವೀ ಮಾತು, ತಿಳಿದೆನಿಂದು !

ಕನ್ನಡಿಗರೆ ಸಂಗಡಿಗರೆ
ನೋಡುವುದಿನ್ನೇನು ?
ಕನ್ನಡತಾಯ್ ಕರೆವಳು ನಡೆ
ನಡೆಯಿರಿ ನೀವಿನ್ನು!

ಏಳಿರಿ ಎದೆಗೆಚ್ಚಿನ ಗಂ
ಡಾಳುಗಳೆ ಪರಾಕು ;
ನಾಳೆಯ ನೆಚ್ಚದ ಕಜ್ಜದೊ
ಳುಜ್ಜುಗಿಸಲೆ ಬೇಕು !

ಒಂದೇ ಬೆಳ್ಗೊಡೆಯಲಿ ಬೆಳೆ
ದೀ ಕನ್ನಡನಾಡು
ಇಂದೆಂತಿದೆ ? ಎತ್ತಲು ಹರಿ
ಹಂಚಾಗಿಹ ಪಾಡು !

ಜಡರಂದದಿ ಸುಮ್ಮನಿರ
ಲ್ಕಿದು ಸಮಯವೆ ಅಲ್ಲ ;
ತಡಮಾಡುವುದೊಳ್ಳಿತೆ, ಕ
ನ್ನಡಿಗರೆ ಅದು ಸಲ್ಲ !

ಒಂದೇ ನಡೆ ಒಂದೇ ನುಡಿ
ಇಂತಿರಲಿನ್ನೇನು ?

ಒಂದಾಗಿರಲಾರೆವೆ, ನಾ
　　ಡೊಂದಾಗದೆ ತಾನು?

ಒಂದಾಳಿಕೆ ಒಂದಿರುವಿಕೆ
　　ಒಂದೊಡನಾಟಗಳ
ಇಂದೇ ಹೊಂದುವ ನಡೆಯಿರಿ
　　ಮುಂದಕೆ ಬಂಧುಗಳೇ!

ಮತಿಗೆಟ್ಟವರೊಬ್ಬಿಬ್ಬರು
　　ತಡೆದರೆ ನಿಲ್ಲುವುದೇ?
ಗತಿಯಿನ್ನೇಂ? ಛಲದಿಂದು
　　ನ್ನತಿಯನು ಸಾಧಿಪುದೆ!

ಸ್ವಾಯತ್ತದ ಪೌರುಷವನು
　　ಮೆರೆಯಿಸಲಿದೆ ಕಾಲ;
ತಾಯ್ನಾಡಿನ ಸೇವೆಗೆ ಮುಂ
　　ದಡಿಯಿಡುವುದೆ ಶೀಲ!

ಎಣ್ದೆಸೆಯಲಿ 'ಬಂದೆವಿದೋ'
　　ಎನ್ನಿರಿ; ತಾಯಡಿಯ
ಕಣ್ದೆರೆದೆರಗುತ ಗೆಳೆಯರೆ
　　ತೊಡಿ ನೀವ್ ಗಂಡುಡೆಯ!

ತಡೆಗಟ್ಟಲಿ ದೈವವು, ಹಿಂ
　　ದಡಿಯಿಡದಿರಿ; ಯುದ್ಧ
ಕಡೆಗಾಣಲಿ ಬಲ್ಮೆಯು ಕ
　　ನ್ನಡಿಗರೆ ಜಯ ಸಿದ್ಧ!

———

# ಸೌಂದರ್ಯಸೂಕ್ತ

ಬಾರಾ ನವಸುಮಕೋಮಲ ಯುವತಿ,
ಸಾರಸ್ವತ ಸೌಂದರ್ಯದ ಮೂರ್ತಿ ‖ ಪ ‖

ಬನಗಳ ಹೂಗಳಲಿಹ ಸಿಂಗಾರ,
ತನುಗೊಂಡೆನ್ನೆದೆಯಲಿ ಮೆಯ್ದೋರ!
ಎಣಿಸಿದೊಡನೆ; ಸೌಂದರ್ಯದಪೂರ,
ತಣಿವಿನ ತವರೇ ತಳುವದೆ ಬಾರ!

ಸುಗುಣದ ಸುಂದರ ಚಿತ್ರವತಾರ,
ಜಗದ ಜನದ ಜೀವನಸುಖಸಾರ!
ಮುಗಿಲಿನ ಮುಸುಕಿಂ ಮೊಗವನು ತೋರ
ಬಗೆದಲ್ಲಿಯೆ; ತವಮಹಿಮೆಯಪಾರ!

ಬೆಡಗಿನ ಲೀಲೆಯನೊಪ್ಪಿದ ಹಾಸ,
ತಡೆಯಿಲ್ಲದ ಸರಳತೆಯ ವಿಳಾಸ
ಚೆಲುವೇ ನಿನ್ನದು; ನಿನ್ನಾವಾಸ
ಒಳಗಿದೆ; ಆಯ್ತಿಂದಾತ್ಮವಿಕಾಸ!

ಕೋಗಿಲೆ ಕೊರಳಲಿ ಮೃದುತರ ಸ್ವರವೇ
ಬಾಗಿದ ಮೇಘದ ಘನತರ ಸರವೇ
ತೂಗುತ ತೆರೆ ತೆರೆತೆರೆಯುತ ಬಾರ
ರಾಗರಸದ ರಂಗೇ ಬಳಿಸಾರ!

ಚೆಲ್ವಿಕೆಯನು ಚೆಲ್ಲುತನಡೆತಂದೆ,
ಎಲ್ಲೆಲ್ಲಿಯು ನಿಲ್ಲದೆ ನೀ ಬಂದೆ ;
ಮೆಲ್ಲಗೆ ಮಲ್ಲಿಗೆಗಂಪನು ತಂದೆ,
ಮೆಲ್ಲೆಲರಲಿ ಮಾತಾಡುತ ನಿಂದೆ !

ಮಗುವಿನಯೆದೆಯಲಿ ಮುಗುದತೆಯಾದೆ
ಚಿಗುರುವ ಪ್ರಾಯದಿ ಪ್ರೇಮದ ಬಾಧೆ;
ಮಗುಳುನ್ನತ ನಿಷ್ಕಾಮವು ಆದೆ,
ಜಗದಂತರ್ಧ್ವನಿ, ದೇವನಿರಾದೆ !

ಅಂಬರದಲ್ಲಿ ದಿಗಂಬರವಸ್ತು,
ನಂಬಿದರಲ್ಲಿ ಮುದಂಬರ ಚಿತ್ತು;
ಹಂಬಲಿಸುವರಲಿ ಹಾಡಿನ ಬಿತ್ತು,
ತುಂಬಿದ ನೇಹವು ತೂರುವ ಮುತ್ತು !

ಹಳ್ಳಿಯ ಬಳ್ಳಿಯ ತಳ್ಳಿಯ ತೂಗೇ,
ಒಳ್ಳೆಯ ಜೀವದ ಒಳಗಿನ ಕೂಗೇ,
ನೀಲಾಭ್ರದಿ ನಲಿದಾಡುವ ಮಿಂಚೇ,
ತೂಲಾವಿದ್ಯೆಯ ತೊಲಗಿಪ ಸಂಚೇ !

ಜೀವಕೆ ಜೀವವ ಬೆಸೆಯುವ ಗತ್ತೇ,
ಭಾವುಕವುಣ್ಣುವ ತನಿರಸದುತ್ತೇ,
ನಾನೆಂಬುದ ನುಂಗಿದನುಡಿ ರನ್ನ,
ಜಾನಿಸಿ ಜಾನಿಸಿ ಪಡೆದೆನು ನಿನ್ನ!

ಅಂತಃಕರಣ ಸಮುದ್ರಜ ವಿಧುವೇ,
ಚಿಂತಾರತ್ನಜ ನೂತನ ವಧುವೇ,
ಚಿಂತಿಸಿದೆನ್ನದೆಗೊದಗಿದ ಮಧುವೇ,
ಸಂತಸಸೌಜನ್ಯಂಗಳ ಪುದುವೇ,

ಎಳೆಮನವರಳಿಪ ವಿಷಯದ ಶೋಧ,
ಅಳಿಮನವುಳಿಸುವ ಬಲುಹಿನ ಬೋಧ,
ಇಳಿಮನವೇರಿಪ ಉತ್ಸವನಾದ,
ಕೆಳಮನಕುಣಿಸುವ ವಾಕ್ಯ ವಿನೋದ !

ಬಾರಾ ಭಾವನ-ದಂಡಿಗೆಯಲ್ಲಿ,
ಬಾರಾ ಪ್ರೇಮದ ಗುಂಡಿಗೆಗಿಲ್ಲಿ ;
ಸಾರಸ್ವತ ಕಾಂತಾರದ ವಲ್ಲಿ,
ಧೀರತ್ವಕೆ ಮೆಚ್ಚನು ನೀಡಿಲ್ಲಿ !

ಮನಸಲಿ ಕನಸಲಿ ಮನೆಯುನು ಮಾಡ,
ಜನುಮಜನುಮಬಾಂಧವ್ಯವ ಬೇಡ ;
ಅನುಮಾನಿಸದೊಲ್ಮೆಯು ಮೆಯ್ಗೂಡ,
ತನುಮನದೀ ತಾರುಣ್ಯವ ಕೂಡ !

ಮುದ್ದು ಮಾತಿನರಗಿಣಿಯವತಾರ,
ಸದ್ದು ಮಾಡದಡಿಯಿಡುವುದದಾರ ?
ಗದ್ದವ ಹಿಡಿದಾಡುವ ಕೈತಾರ,
ಮುದ್ದಿನಕಣಿ ಸೌಂದರ್ಯವೆ ಬಾರ !

ಮುತ್ತಿನಮಣಿಗಳ ಮಾಲೆಯ ಧರಿಸಿ,
ಹತ್ತಿರ ಮಂಗಲವಾದ್ಯವ ಕರೆಸಿ,
ಎತ್ತಿದ ಹಾರವನೆದೆಗೇ ತಾರ,
ಮತ್ತೇನಿದೆ ಸಂತಸದ ವಿಚಾರ !

---

# ಶರತ್ಕಾಲ

೧

ಮಂದಾನಿಲನಕೂಡ ಮಾತಾಡುತಿರುವಂತೆ
ತೆಂಗು ಕೌಂಗುಗಳು ತಲೆಯಾಡಿಸುತಿವೆ;
ಅರಳಿಯೆಲೆ ಮರಮರಳಿ 'ಶ್ರಾವಣದ ಸಿರಿಬೆಳಗು
ಹರಳು ಹರಳೆಂದು' ಹಂದಾಡುತ್ತಿದೆ!
ಇದಿರ ಗುಡ್ಡವು ಕೂಡ ಅಹುದೆನ್ನುವಂತಲ್ಲಿ
ಮರ-ಮುಕುಟವನ್ನು ತೂಗಾಡಿಸುತಿದೆ;
ತೆಂಗುಗಳ ನಡುವಿರುವ ಪೇರಿಳೆಯು ಮಾತಿಂಗೆ
ಹೂಂಗುಟ್ಟಿ ಕೊಂಬೆಗೈ ಬೀಸುತಲಿದೆ!

೨

ಹಸಿರುಟ್ಟ ಭೂದೇವಿ ಹಾಯಾಗಿ ಮಲಗಿಹಳು
ದಣಿವುಗಳೆಯಲು ಧೇನು ಮಲಗಿದಂತೆ:
ಅಳಿಗಿಳಿಗಳತ್ತಿತ್ತ ಹೂ ಹಣ್ಣು ಹುಡುಕುತಿವೆ
ಬಂದು ಪಶ್ಚಿಮ ಘಟ್ಟದತ್ತಣಿಂದೆ!
ಎಳಬಿಸಿಲ ಹೊಳಪನ್ನು ಪಡಿಗೊಡುವ ನದಿ ನದಗ-
ಳಿಳಿದೆಯ್ದುತಿವೆ ಮೆಲ್ಲನಬ್ಧಿಯತ್ತ;
ಚಳಿಗಾಲ ತುದಿಗಾಲನೂರಿಹುದು; ಅರೆಮಾಗಿ
ಕೆಳಗೆ ತಲೆ ಹಾಕಿಹುದು ಗದ್ದೆ ಬತ್ತ!

೩

ಇಂಥ ಕಾಲದ ಸೊಬಗನಿಂಥ ದೇಶದ ಬೆಡಗ
ಕಂಡೆ; ಕಂಡಾಗುವುದೆ ಸುಖವ ಪಡಲು ?
ಎಂಥ ಚಂದವೆ ಇರಲಿ ಬುವಿಬಾನು ಸೊಗಯಿಸದು
ಅಂತರಂಗದಿ ದಾಸ್ಯದಗ್ನಿ ಸುಡಲು!
ಶರದ ಕಾಲವೆ ಇಂದು ಬರದ ಕಾಲವೊ, ಬೀದಿ
ತುರುಗಳಿಗು ಕಡೆ ನರರಹಿಂಡು; ಭೂಮಿ
ಕರೆವ ಸುಖ ಸಾಧನವನುಣಬಿಡನು ಪಶ್ಚಿಮದ
ದೊರೆ ರಾಜ್ಯ ತೃಷ್ಣಾತರಂಗಗಾಮಿ !

———

## ಮಕ್ಕಳಿಗೆ ಕರೆ

ಮಕ್ಕಳೆ ಎದೆವನೆಯೊಕ್ಕಲೆ ಬನ್ನಿ
ಓಡಿ ಓಡಿ ಬನ್ನಿ ;
ಅಕ್ಕರೆಯೆನ್ನುವ ಸಕ್ಕರೆಯಿದಕೋ
ತಕ್ಕೊಳ್ಳಿರಿ ಬನ್ನಿ ! || ಪ ||

ಮುಗಿಲಿನ ಮಕ್ಕಳೆ ಮಸಗುತ ಬನ್ನಿ,
ಹಗಲಿನ ಮಕ್ಕಳೆ ಹೊಗರನು ತನ್ನಿ,
ನಗಗಳ ಮಕ್ಕಳೆ ನೆಗೆಯುತ ಬನ್ನಿ
ರಗಳೆಯ ಮಕ್ಕಳೆ ರಾಗವ ತನ್ನಿ !

ಜಾರಿ ಬನ್ನಿರೋ,
ಹಾರಿ ಬನ್ನಿರೋ,
ಓಡಿ ಬನ್ನಿರೋ,
ಕೂಡಿ ಬನ್ನಿರೋ !

ಕುಣಿಯುತ ಬನ್ನಿ,
ಮಣಿಯುತ ಬನ್ನಿ,
ಉಲಿಯುತ ಬನ್ನಿ,
ನಲಿಯುತ ಬನ್ನಿ !

ಅಂಬೆಗಾಲನಾಡಿಸಿ ಬನ್ನಿ,
ತುಂಬೆಗಾಲ ನೀಡಿಸಿ ಬನ್ನಿ,
ತಪ್ಪುಗಾಲ ತಾಗಿಸಿ ಬನ್ನಿ,
ತಿಪ್ಪುಗಾಲ ಬಾಗಿಸಿ ಬನ್ನಿ || ಮಕ್ಕಳೆ....

ಸಣ್ಣ ಹೆಣ್ಣೆ ನೀಸಾಗಿತ್ತ,
ಬಣ್ಣದವೊನಕೆಯು ತಾಯಿತ್ತ ;
ಬೆಣ್ಣೆಯು ಕೊಡುವೆನು ಬಾಯೆತ್ತ,
ತಿನ್ನು ತಿರುಗು ಬೇಕಾದತ್ತ !

ಚಿಕ್ಕಪೋರ ಚಂಚಲ ಗುಣಹಾರ,
ಚೊಕ್ಕ ಚಂದ್ರ ಚಲುವಿನ ಚಿತ್ತಾರ!
ರೊಕ್ಕ ಝಣಝಣರೆನುತ್ತಿದೆ ಹಿಡಿಬಾರ,
ತಕ್ಕೊಡುವೆನುಬಾ ಬಣ್ಣದ 'ಕಾರ'!

ಅಲ್ಲಿ ಇಲ್ಲಿ ಬಂದಾಡುವ ಹಾಡುವ
ನೋಡುವ ಮರಿಯಾರು?
ಬೆಲ್ಲ ಕೊಬ್ಬರಿಯು ಮೆಲ್ಲಗೆ ಮೆಲ್ಲಗೆ
ಮೆಲ್ಲುವವರು ಯಾರು ?

ಎತ್ತಲು ಜಗದಲಿ ಸಾವೋ ನೋವೋ,
ಚಿತ್ತದೊಳಿಲ್ಲೂ ಕಾವೋ ಬೇವೋ !

ಮುಗ್ಧತೆವೆತ್ತಿಹ ಮಣಿಗಳಿರಾ,
ಸ್ನಿಗ್ಧತೆ ತುಂಬಿದ ಖಣಿಗಳಿರಾ!
ಪಾಪವನರಿಯದ ತಾಪವ ತಿಳಿಯದ
ಆ ಪರಮೇಶ್ವರ ರೂಪವ ಹೋಲುವ—

ಮೃದುಮಧುರಾತ್ಮದ ಯತಿವರರೇ,
ಅಧರಾಮೃತವನು ಕೊಡಿ ಸುರರೇ! ||ಮಕ್ಕಳೆ....

ನೀವೇ ಚಿನ್ನದ ಬೊಂಬೆಯರು,
ನೀವೇ ರತ್ನದ ರಂಭೆಯರು,

ನೀವೇ ಗಣ್ಯ,
ನೀವೇ ಪುಣ್ಯ !

ಜೀವನದಲಿ ನೀವೇ ಹೂವು,
ಭಾವನೆಯಲಿ ಬರಿ ನಿಮಗೇ ಠಾವು;
ಸಣ್ಣವರಾಗಿಹ ನರರೇ ಚೆನ್ನ,
ದೊಡ್ಡವರಾದರೆ ಹೊಯ್ವರು ಕನ್ನ!
ನಂದನವನದರವಿಂದಗಳೇ,
ಮಂದಾರದ ಮಕರಂದಗಳೇ,

ರಸರೂಪಗಳೇ,
ಹೊಸ ದೀಪಗಳೇ,

ದೆಸೆದೆಸೆಗೋಡುವ ಚಿಟ್ಟೆಗಳೇ,
ಮಿಸುನಿಯರಾಗದ 'ಮಿಟ್ಟಿ'ಗಳೇ,
ಆನಂದಾಂಭೋರಾಶಿಯ ತೆರೆಗಳೆ

ತೇಲಿತೇಲಿ ಬನ್ನಿ;

ಚೀನಾಂಬರವನು ತೊಡಿಸುವೆ, ತಲೆಯನು

ತೂಗಿ ತೂಗಿ ಬನ್ನಿ!
ತೆಕ್ಕನೆ ಬನ್ನಿ,
ಫಕ್ಕನೆ ಬನ್ನಿ—

ಮಂಗಲಮಯ ಜಲ್ಪನೆಗಳಿರಾ,
ತಂಗಾಲದ ಕಲ್ಪನೆಗಳಿರಾ,

ತಾವರೆಗಳಿರಾ ದೇವತೆಗಳಿರಾ,
ನೀವೇ ನನ್ನುಸಿರು;
ನಾನೇ ಕರೆಯಲು ನೀವೇ ನೆರೆಯಲು
ಲೀಲೆಗೆ ಮತ್ತೆ ಶುರು! ॥ ಮಕ್ಕಳೆ....

———

# ಯುದ್ಧಾಯ ಯುಜ್ಯಸ್ವ

ಎಲೆ ಹೃದಯ ನಿನ್ನ ಕಳವಳವ ಕಂಡು ನಗೆ
ಬರುವುದೆನಗೆ ಬಹಳ ;
ಎಲೆಲೇ ಎಂಥ ಮೃದು ಕುಸುಮವಾದೆ, ನೀ
ನಹಹ ! ಏನು ಸರಳ !

ಇದು ಏನು ದುಗುಡ ಮತ್ತೇನು ಮರುಕ, ಇದು
ಯಾವ ಬಗೆಯ ನಡುಕ ?
ಹೆಣ್ಣಾದೆಯೇನು, ಹುಣ್ಣಾದೆಯೇನು ? ತೆಗೆ
ನೂಕು ಇಂಥ ತೊಡಕ !

ಹುಲ್ಲಿಂಗೆ ಹೆದರುವರೆ ಸಾಕು ಸಾಕು ; ಮೇ
ಲೆತ್ತು ವಜ್ರಹಸ್ತ—
ಕಲ್ಲನ್ನೆ ನುಂಗಿ ನೀರ್ಕುಡಿದ ಬಂಟನಿಗು
ಕಲಿಸಬಹುದು ಶಿಸ್ತ !

ಮೂರ್ಖರಿಗೆ ಎತ್ತದಿರೆ ಮತ್ತೆ ದೇವ ನಿನ-
ಗೇಕೆ ಮುಷ್ಟಿಯಿತ್ತ ?
ನೂರ್ಕಾಲ ಬದುಕಿ ಫಲವೇನು, ಹೇಡಿ ತಾ
ನಿದ್ದು ಯಿದ್ದು ಸತ್ತ !

ಬದುಕಿನಲ್ಲಿ ಬದುಕಬೇಕೆಂಬ ಬಯಕೆಯಿರೆ
ಆಗು ಶೂಲಪಾಣಿ—

ಎದುರಿಸುವ ಕುಜ್ಞತಾಮಸರನಿರಿದು ಕೊ-
ಲ್ಲೆಂಬುದಮರವಾಣಿ !

ವಿಧಿವಾದ ಶರಣತೆಯ ನಂಬಬೇಡ, ನಡೆ
ತಿಳಿವನೀಂಟೆ ತೇಗು—
ಅಧಿಕಾರದಿಂದ ಭಯವೃತ್ರನನ್ನು ಅರಿ
ದೊಗೆದು ಇಂದ್ರನಾಗು !

ಈ ಆತ್ಮ ತಾನು ಬಲಹೀನಲಭ್ಯನ
ಲ್ಲೆಂಬುದರಿಯೆಯೇನು ?
ಕ್ಷುದ್ರಾತ್ಮರೆಂದುದಕೆ ಹೆದರಿ ನಡೆಯೆ
ಧೀಶಕ್ತಿ ಸತ್ತಿತೇನು ?

ಶ್ರೀಮಂತಗಿಂತ ದುರ್ದಾಂತ ದೇಹಬಲ
ವಂತನಾದರೇನು ?
ಧೀಮಂತನಾಗಿ ವಿಕ್ರಾಂತ ಪಾದದಿಂ
ಮೆಟ್ಟಿ ಆಗು ಭಾನು !

ಬಲು ಹೆದರಿ ಹೆದರಿ ನಡೆವಾತ ಸಾವನಕ
ಹೆದರಿ ಸಾಯಬೇಕು ;
ಮೈಮುದುರಿ ಕುಳಿತವನು ಮುದುರಿ ಮುದುರಿ ಮು-
ಣ್ಣಾಗಿ ಹೋಗಬೇಕು !

ಈ ಪ್ರಕೃತಿಯನ್ನು ಗೆದ್ದಾಳಬಯಸುವಗೆ
ಪುರುಷಕಾರಬೇಕು ;
ಸ್ವಪ್ರಕೃತಿಯಾದ ದುರ್ದಮ್ಯ ತೇಜವನು
ಬೆಳಗಿ ತೋರಬೇಕು!

ಓ ಎದೆಯೆ ಚಂದ್ರಹಾಸವನು ತುಡುಕು, ತಡ
ಮಾಡಬೇಡ ಹೂಡು—

ಸಿಡಿದೆದ್ದು ಕಾಲದಿ ವಿರುದ್ಧ ಶಕ್ತಿಗಳ
ಕಡಿದು ಚಂಡನಾಡು!

ಪೈಶುನ್ಯ ಪಶುವನಾಶ್ರಯಿಸಲೇನು ಶನಿ
ತಾಗಿತೇನು ನಿನಗೆ?
ಬರಿಶೂನ್ಯವಲ್ಲದಿನ್ನೇನು ಸಿಕ್ಕದೈ
ಮಾಡಲಂತು ಕೊನೆಗೆ!

ಹಿಡಿ ಕೊಡುವೆ ವೀಳ್ಯ "ಯುದ್ಧಾಯ" ಹೃದಯ "ಯು
ಜ್ಯಸ್ವ" ದೈನ್ಯ ಬೇಡ–
ನಡೆ ಇರುವೆ ನಾನು ಮತಿಕೃಷ್ಣ ಕಾರ್ಯರಥ
ನಡೆಸಲೀಗ ನೋಡ!

———

# ಕನ್ನಡ ಕಡಲು ಸೀಮೆ

ಸಿರಿಯೆಂಬೆನು ಸರಿಯೆಂಬೆನು ಕನ್ನಡ ಕಲ್ಪದ್ರುಮಗಳೇ
ಹೊಳೆಯೆಂಬೆನು ನೆರೆಯೆಂಬೆನು ಕನ್ನಡ ಕಡಲೇ ;
ಹಸಿರೆಂಬೆನು ಹೊಸತೆಂಬೆನು ಕನ್ನಡ ಜಗವೇ ! || ಪ ||

೧

ಹೆಜ್ಜೆ ಹೆಜ್ಜೆಗೊಂದು ಹೊಳೆ,
ಗೆಜ್ಜೆಗಾತಿಯೊಂದು ಕಳೆ ;
ಹಚ್ಚಹಸಿರು ತುಂಬು ಬೆಳೆ,
ಬೆಟ್ಟದಟ್ಟಹಾಸ–ಮಳೆ !

ದೋಣಿಸೇಣಿ ಹಡಗಗಿಡಗ
ಹತ್ತಿಬರುವ ಕಡಲ ಗುಡುಗ
ಕೇಳಿಕೇಳಿ ನುಡಿಯು ಬೆಡಗ
ಕಲಿತ ಜನವ ನೋಡು ಹುಡುಗ

ಕರ್ನಾಟಕ ನಂದನವನ–
ಪ್ರಕೃತಿಗಿಲ್ಲಿ ಚಿರಯೌವನ ;
ನೆಲಜಲಗಳ ಸಮಜೀವನ
ಮೂಡಿದ ಜನಮನ ಭಾವನ !

೨

ಎತ್ತೆತ್ತಲು ತೆಂಗು,
ನೀ| ಮತ್ತೆ ಮತ್ತೆ ತಂಗು ;

ಪಚ್ಚೆ ಪಯಿರ ರಂಗು–
ಅದ|ರಲ್ಲಿ ತೃಪ್ತಿ–ಗುಂಗು !

ಕನ್ನಡಿತಿಯ ಪಾಡು
ಎಂತಿಹುದು ಕೇಳಿನೋಡು–
ನಿನ್ನ ನುಡಿಗೆ ಜೋಡು
ಉ|ತ್ತರದ ರೂಪ ಹಾಡು !

ಕೆಯ್ಯೊಲದಲಿ ನೋಡೆ 'ನಟ್ಟಿ'–
ಅವಳ ಕೈಯ ಕಮಲಗಟ್ಟಿ ;
ಕರೆದು ನೋಡು ಕೈಯ ತಟ್ಟಿ ;
'ಗುರುಬಿ' ನಿಂದ ಬರ್ಕು ದಿಟ್ಟಿ ;

೩

ಆ ನೀರಲಿ ನಿಂತ ನೀರೆ–
ಗಿರುವುದು ಬರಿ ಸೀರೆ ;
ಆಯೆದೆಯಾ ಕಾವ್ಯಧಾರೆ–
ಗಿಲ್ಲ ಮರೆಯು ಬೇರೆ !

ಅವಳೂರಿನ ಅರೆನುಡಿ
ಕನ್ನಡನುಡಿ ಮುಂಗಿಡಿ ;
ಕನ್ನಡ ಮೊದಲಿಗರಡಿ
ಮೂಡಿದ ನೆಲವನು ಮುಡಿ !

ಯಕ್ಷಗಾನ ಲಕ್ಷ್ಮೀಶ್ವರ
ಧಿತ್ತೋಂತಕ ತರಿಕಿಟತರ–
ನರ್ತನ ಕೌಶಲ ನಿರ್ಭರ,
ಸಹೃದಯ ಹೃದಯೋತ್ಸವಕರ !

೬

ತೆಂಗಿನುದ್ದ ತೆರೆ
ಕ|ನ್ನಡದ ವೀರ ಕರೆ;
ಮುಗಿಲ ತಡೆವ ನರೆ—
ಮೈ|ಲುದ್ದ ಬೆಟ್ಟದೊರೆ!

ಇಂದ್ರಪ್ರೂಜೆ ಜೋರು,
ಅದ|ಕಿಹುದು ತೆರೆಯ ತೇರು;
ಕಡಲ ನಟನ ಸಾರು,
ಆ|ಕುಣಿತದಲ್ಲಿ ಸೇರು!

ಧೊಪ್ಪೆನ್ನುವ ಧುಳುಮೆನ್ನುವ
ಅಪ್ಪಳಿಸುವ ನೀರ್ಗೈಗಳ
ಸಪ್ಪುಳ ಮದ್ದಳೆ ಹೊಡೆತವು
ಕುಪ್ಪಳಕನುಗುಣವಿದೆಯಲ!

೭

ಮಲೆನಾಡಿನ ಮಲೆತ ಕಾಡು,
ಬಯಲು ಸೀಮೆ ಬಯಲು ಬೀಡು
ಇಲ್ಲಿಲ್ಲ; ಇದೊಂದು ನಾಡು
ಹಿತಮಿತ ಮೃದುಮಧ್ಯ ಜಾಡು!

ರತ್ನಾಕರವರ್ಣಿಯ ರಸ–
ರತ್ನಾಕರವಿಲ್ಲಿದೆ ; ಹೊಸ
ಮುದ್ದಣರೊಟ್ಟೈಕ್ಕಿದ ಜಸ
ಹೊನಲಾಗಿದೆ, ಅಲ್ಲಿದು ತುಸ!

ಎರಡು ಪಯಿರ ಹೊಲವೆ ಬಾಳ್,
ಕರಡಿ ಹರಿವ ಜಲವೆ ಬಾಳ್ ;
ತೆಂಗಿನ ತವರೂರೆ ಬಾಳ್
ತೆಂಗನ್ನಡ ನೀರೆ ಬಾಳ್ !

———

## ಹರಿಯಲೆಳಸುತಿಹುದು ಚಿತ್ತ

೧

ಹರಿಯಲೆಳಸುತಿಹುದು ಚಿತ್ತ
ಹತ್ತಿರಕೆ
ಹತ್ತಿರಕೆ—
ಅರಳಿದರಳ ಕಂಪಿನೊಳಗೆ,
ತೆರೆದ ಬೆಳರ ತಂಪಿನೊಳಗೆ,
ತರಳ ತೆರೆಯಲಂಪಿನೊಳಗೆ,
ತಿರುಳು ತಿರುಳಿಗೆ!
ಅಳುವಿನರೆಯ ತರಿದು ಮೋಹ—
ಕೊಳೆಯ ತೊಳೆದು ತನ್ನತನದ
ಪರಿಗೆ ಭಂಗ ಬಾರದಂತೆ
ದಮದ ಕೈಯ ಚಾಚಿಯೆದೆಯ
ಸರಳಗತಿಯೊಳೆನ್ನ ಮನದ
ಮೂರ್ತಿಯಿರುವ ದೇಗುಲಕ್ಕೆ—
ಹರಿಯಲೆಳಸುತಿಹುದು ಚಿತ್ತ
ಏಕಭಾವದಿ!

೨

ಪ್ರೇಮ ಶರಧಿ ತಲದಿ ರನ್ನದಂತೆ ತೊಳಗಲೆಳಸಿ ಸತ್ಯ—
ಧಾಮದೆರೆಯನನ್ನು ಹುಡುಕಿ ನಡೆವೆನೆಂದು ನೆನಸಿ ನಿತ್ಯ

ನೇಮುದಗ್ನಿಯಲ್ಲಿ ತಪಿಸಿ
ಶುದ್ಧ ಭಾವವೆನ್ನದಿಂದು–
ಕಲಹ ವಿರದ ಕಪಟ ಬರದ
ಕುದಿತ ಕಳೆದ ವಿದಿತವಿಳಿದ
ತಿಳಿತನವನು ತೋರಿದೆ ;
ಒಲವು ನಲವು ಸರಸ ಹಾಸ,
ಬೆರಕೆಯೆರಕ ರಸವಿಲಾಸ–
ಇದೋ ಇವನು ಕೋರಿದೆ !

ಹರಿಯುಲೆಳಸುತಿಹುದು ಚಿತ್ತ
ಎದೆಯ ಸಿರಿಯ ಸೂರೆ ಮಾಡಿ
ಮಧುವಿಗಿಂತ ಮಧುರವಾದ
ಮುದವ ಸವಿಯಲು !

೩

ಹಗುರವೆನಿಸುತಿಹುದು ನೇಮ,
ಚಿಗುರುತಿಹುದು ಒಳಗೆ ಪ್ರೇಮ ;
ಬೆಳೆಯುತಿಹುದು ಮನದ ಆಸೆ,
ಒಳಿತ ಕಂಡೊಡನೆ ಪಿಪಾಸೆ–

ಇಲ್ಲಿ ಬಾಳಿ ಇಲ್ಲಿ ತಾಳಿ
ಕೇಡನೆಲ್ಲ ಕಳಚಿ ಹೂಳಿ,
ನೇಹ–ನಿಧಿಯ ಸೂರೆಗೊಟ್ಟು
ಎದೆಗೆ ಎದೆಯ ಜೋಡಿಸಿಟ್ಟು,
ಅಂತರಾತ್ಮವನ್ನು ಕೂಡಿ
ಪ್ರಣಯಕಲಹವನ್ನು ಹೂಡಿ,
ಒಗೆಯುವಮೃತಬಿಂದುವ
ಕಂಡದರಾನಂದವ–

ಕೆಳೆಯರೊಡನೆ ತೆಗೆದು ಹಂಚಿ
ಹೀರಿಹಾಡಿ ನೋಡಲೇ?
ಈ ಕ್ಷಣವೇ ನಡೆಯಲೆ?

೪

ಬಾಳ ಹೂವು ಬಾಡುತಿರಲು, ಮನದ ಆಸೆ ಮುಸುಳುತಿರಲು,
ಕನಸು ಕಂದಿ ಕರಗುತಿರಲು, ಪ್ರಾಯ ಹೋಗಿ ಮುಪ್ಪು ಬರಲು
ಏನಿದ್ದರು ವ್ಯರ್ಥವೆ!
ಅದಕೆ ಮೊದಲೆ ಏಳಬೇಕು,
ಮನವ ಮಡಿಯ ಮಾಡಬೇಕು,
ಒಳಗಿನಾತ್ಮದೊಳಗ ಕಂಡು
ಅಲ್ಲಿ ಮುಳುಗಿ ಮಿಾಯಬೇಕು ;
ಹರಿಯಲೆಳಸುತಿಹುದು ಚಿತ್ತ
ಅದಕಾಗಿಯೆ ಹತ್ತಿರಕೆ—

ಹತ್ತಿರಿದ್ದು ದೂರವಾದ
ದೂರವಿದ್ದು ಸಣ್ಣದಾದ
ನೀರಗಡಲ ನೀರಮುಗಿಲ
ವಿಪುಲಬಾನ ವಿಸ್ತಾರದ
ಕಾಲಗತಿಯ ಕಾಣದಂಥ
ವಿಶ್ವಚುಂಬನೋತ್ಸಾಹದ
ಪ್ರೇಮಮೂರ್ತಿ ಇರುವೆಡೆ!

———

